पण्डितराजश्रीनिवासकविविरचितः

# श्रीमत्सत्यनिधिविलासः

(सर्वतोविलासव्याख्यासमेतः)

(ಕನ್ನಡಾನುವಾದ ಸಮೇತ)



संपादकः भाषानुवादकश्च

**जयतीर्थाचार्यः पगडाल**

प्रकाशनम्

**विश्वमध्वमहापरिषत्**

**जयतीर्थ विद्यापीठम्, उत्तरादिमठः, बेङ्गळूरु-४**

।। श्रीदिग्विजयरामो विजयते ।।

।। श्रीसत्यप्रमोदगुरुभ्यो नमः ।।

# श्रीसत्यनिधिविलासः

# ಶ್ರೀಸತ್ಯನಿಧಿವಿಲಾಸಃ

(ಕನ್ನಡ ಅನುವಾದ ಸಹಿತ)

सम्पादकः

पं.जयतीर्थाचार्य पगडाल


ಪ್ರಕಾಶಕರು

ವಿಶ್ವಮಧ್ವ ಮಹಾ ಪರಿಷತ್

ಶ್ರೀಜಯತೀರ್ಥ ವಿದ್ಯಾಪೀಠ, ಉತ್ತರಾದಿಮಠ

ಬಸವನಗುಡಿ, ಬೇಂಗಳೂರು - ೪

**ŚRĪ SATYANIDHIVILASA** of **Sri Srinivasacharya** with the commentary of **Sri Lakshmeeshwara Narasihmachar** and translation in Kannada by **Jayatirthacharya Pagadal.**

Editor : **Jayatirthacharya Pagadal**

*Published by :*

**Vishwa Madhwa Mahaparishat,**
Jayatirtha Vidyapeeth, Poojamandir,
Basavanagudi, Bangalore - 560 004.

First Edition : 2001

Copies : 1000

Price : Rs.60/-

*Copies can be had from :*

1. Sri Jayateertha Vidyapeeta
Uttaradi Math, Basavanagudi, Bangalore - 560 004.
Ph: 6678726

2. Sri Uttaradi Math,
Kachiguda, Lingampalli, Hyeadcraba.
Ph: 7564624, 7561817

3. Uttaradi Math, Fort, Kurnool, Ph-44082

Printed at :
Vagartha Printonics, Bangalore-19.



ಶ್ರೀ ಸತ್ಯನಿಧಿತೀರ್ಥ ಕರಾರ್ಚಿತ ತುಮಕೂರು ಆಂಜನೇಯ



श्री श्री १००८ श्री सत्यव्रततीर्थ मुलवृंदावन
सांगली



ಶ್ರೀ ಸತ್ಯನಿಧಿಗಳ ಶಿಷ್ಯರಾದ ಶ್ರೀ ಸತ್ಯನಾಥರು

।। ಶ್ರೀದಿಗ್ವಿಜಯರಾಮೋ ವಿಜಯತೇ ।।

# ಅನುಗ್ರಹ ಸಂದೇಶ

**ಬಿಡಾರ :- ವಿಜಯವಾಡ** **ದಿನಾಂಕ :- 21-02-2001**

ಶ್ರೀಶ್ರೀ ೧೦೦೮ ಶ್ರೀಸತ್ಯನಿಧಿತೀರ್ಥ ಶ್ರೀಪಾದಂಗಳವರು ಜ್ಞಾನ, ಭಕ್ತಿ ಹಾಗೂ ವೈರಾಗ್ಯಗಳ ಸಾಕಾರಮೂರ್ತಿಗಳು. ಮಹಾತಪಸ್ಸಂಪನ್ನರು. ಮಹಾಮಹಿಮಾನ್ವಿತರು. ಇವರು ಶ್ರೀಮತ್ಸತ್ಯವ್ರತತೀರ್ಥ ಶ್ರೀಪಾದಂಗಳವರಿಂದ ವೇದಾಂತಸಾಮ್ರಾಜ್ಯದಲ್ಲಿ ಅಭಿಷಿಕ್ತರಾದವರು ಮತ್ತು ಶ್ರೀಮತ್ಸತ್ಯನಾಥತೀರ್ಥರನ್ನು ನಾಡಿಗೆ ನೀಡಿದ ಮಹಾಮಹಿಮರು. ಇವರ ನಾಮದ ಜಪದಿಂದ ಸಕಲ ಪುರುಷಾರ್ಥಗಳು ಸಿದ್ಧಿಸುವವು ಮತ್ತು ಇವರ ಸ್ಮರಣೆಮಾತ್ರದಿಂದ ಭಗವಂತನ ಅನುಗ್ರಹ, ಪರವಾದಿಗಳ ನಿಗ್ರಹವಾಗುವದು ಎಂಬುದು ಅವರ ಪರಮಪ್ರಿಯಶಿಷ್ಯರಾದ ಶ್ರೀಮತ್ಸತ್ಯನಾಥತೀರ್ಥರ ಅನುಭವದ ನುಡಿಯಾಗಿದೆ.

ಇವರ ಮಹಾಮಹಿಮೆಯನ್ನು ಪ್ರಕಾಶಗೊಳಿಸುವ ಕಾವ್ಯ "ಶ್ರೀಸತ್ಯನಿಧಿವಿಲಾಸ". ಈ ಕಾವ್ಯವು ಈಗಾಗಲೇ ಶ್ರೀಸತ್ಯಧ್ಯಾನ ವಿದ್ಯಾಪೀಠದಿಂದ ಪ್ರಕಾಶಿತವಾಗಿದೆ.

ಸಂಸ್ಕೃತವನ್ನರಿಯದ ಜಿಜ್ಞಾಸುಗಳು ಆಸಕ್ತರು ಶ್ರೀಸತ್ಯನಿಧಿತೀರ್ಥರ ಮಹಿಮೆಯನ್ನು ಓದಿ ತಿಳಿದು ಕೃತಾರ್ಥರಾಗಬೇಕೆಂಬ ಬಯಕೆಯಿಂದ ನಮ್ಮ ಪ್ರಿಯಶಿಷ್ಯ ಪಂ.ಜಯತೀರ್ಥಾಚಾರ್ಯ ಪಗಡಾಲ, ಸುಂದರವಾದ ಶೈಲಿಯಲ್ಲಿ ಭಾವಪೂರ್ಣವಾಗಿ ಕನ್ನಡೀಕರಿಸಿದ್ದಾನೆ. ಕನ್ನಡವನ್ನರಿಯದ ಜನರಿಗೂ ಗುರುಗಳ ಮಹಿಮೆ ತಿಳಿಯಬೇಕೆಂದು ಆಂಗ್ಲದಲ್ಲಿ ಹಾಗೂ ತೆಲುಗುಪಿನಲ್ಲಿಯೂ ಸಂಗ್ರಹವಾಗಿ ಚರಿತ್ರೆಯನ್ನು ಇಲ್ಲಿ ಕೊಡಲಾಗಿದೆ. ಈ ಹೊತ್ತಿಗೆಯನ್ನು ಉತ್ತರಾದಿಮಠದ ವಿಶ್ವಮಧ್ವ ಮಹಾಪರಿಷತ್ ಪ್ರಕಾಶನಕ್ಕೆ ತಂದಿದೆ. ಆಸ್ತಿಕ ಸಮಾಜ ಇದರ ಉಪಯೋಗ ಪಡೆದು ಕೃತಾರ್ಥರಾಗಬೇಕು.

ಕಾವ್ಯದ ಅನುವಾದವನ್ನು ಮಾಡಿದ ನಮ್ಮ ಪ್ರಿಯಶಿಷ್ಯನಾದ ಪಂ.ಜಯತೀರ್ಥಾಚಾರ್ಯ ಪಗಡಾಲ ಇವನಿಗೆ ಇನ್ನೂ ಅನೇಕ ಗ್ರಂಥಗಳನ್ನು ಬರೆಯುವ ಸಾಮರ್ಥ್ಯವನ್ನು ನೀಡಲೆಂದು ಅಸ್ಮದುಪಾಸ್ಯ ಶ್ರೀಮೂಲದಿಗ್ವಿಜಯರಾಮಾಭಿನ್ನ ಶ್ರೀವೇದವ್ಯಾಸ ದೇವರಲ್ಲಿ ಶ್ರೀಮೂಲಸೀತಾದೇವಿಯರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು
**ಶ್ರೀ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು**
ಶ್ರೀಮದುತ್ತರಾದಿಮಠ

।। श्रीदिग्विजयरामो विजयते ।।

ಈ ಹೊತ್ತಿಗೆಯನ್ನು ಹೊರತರಲು ಸಹಾಯ ಮಾಡಿದ ಶ್ರೀಯುತರಾದ ಭಾಸ್ಕರರಾವ್ ಹಾಗೂ ಅವರ ಕುಟುಂಬದವರಿಗೂ ಆಯುರಾರೋಗ್ಯ ಐಶ್ವರ್ಯಗಳನ್ನು ಕೊಡಲೆಂದು ಅಸ್ಮದುಪಾಸ್ಯ ಶ್ರೀಮನ್ಮೂಲರಾಮ, ಶ್ರೀದಿಗ್ವಿಜಯರಾಮ ಹಾಗೂ ಶ್ರೀವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು



# ಮುಖಪುಟ ಲೇಖನ

ಅದ್ಭುತ ಶಿಲೆ, ಕಲೆಗೆ ನೆಲೆ, ಉಪದೇಶದ ಸೆಲೆ. ತನುವ ದಂಡಿಸು. ಕೇಶವನಿಗೆ ದಂಡವತ್ ಪ್ರಣಮಿಸು ಎಂದು ವಾಮಹಸ್ತದ ದಂಡದ ಮೂಲಕ ಸೂಚಿಸಿದರೆ, ಜಲಪೂರ್ಣಕಮಂಡಲು ಸಹಿತ ಜ್ಞಾನಮುದ್ರೆ, ಶ್ರೀಮದಾನಂದತೀರ್ಥರ ತೀರ್ಥದಿಂದ ಜ್ಞಾನಪಡೆ-ದುಕೋ. ಅದು ಗಂಗಾದಿ ತೀರ್ಥಗಳಿಗಿಂತ ಮಿಗಿಲು. ಪಾವನ ಎಂದು ಸೂಚಿಸುತ್ತಿದ್ದಾರೆ.

ಸಕಲ ಇಷ್ಟಾರ್ಥಗಳನೀವ ಕಾಮಧೇನುವಿನಂತೆ ನಾ ಇದ್ದೇನೆ ಎಂದು ಕಾಮಧೇನುವಿನಡಿ ನಿಂತಿದ್ದಾರೆ. ಇದು ಸತ್ಯ. ಇದಕ್ಕೆ ಕೇಶವನೇ ಸಾಕ್ಷಿ ಎಂದು ಅವನ ಸನ್ನಿಧಿಯಲ್ಲಿ ವಿರಾಜಿಸಿದ್ದಾರೆ.

ವಿಷಯಗಳೆಡೆ ಧಾವಿಸುವ ನಮ್ಮನ್ನು ದಂಡಿಸಿ, ಸಕಲ ಇಷ್ಟಾರ್ಥಗಳೊಂದಿಗೆ ಶಾಸ್ತ್ರರಸವನ್ನೀವ,ಕೇಶವನ ಪಾದಕ್ಕೆ ಹಚ್ಚುವ ಭಂಗಿಯಲ್ಲಿ ಕಂಗೊಳಿಸುತ್ತಿರುವರು ಗುರುವರ್ಯರು ಶ್ರೀಸತ್ಯನಿಧಿಮುನಿವರ್ಯರು.

**ಇದು ಶ್ರೀಸತ್ಯನಿಧಿಗಳ ವೃಂದಾವನದಲ್ಲಿರುವ ಶ್ರೀಸತ್ಯನಿಧಿಗಳ ಪ್ರತೀಕ ಪ್ರಪಂಚದಲ್ಲಿ ಈ ತರಹದ ವೃಂದಾವನ ಇದೊಂದೇ.**

# ನಿಮ್ಮ ನೆನಪಿಗೆ

**ಶ್ರೀಸತ್ಯನಿಧಿಗಳ ಕಾಲ 1638 – 1660**

**ಶ್ರೀಮದಾಚಾರ್ಯರ ನಂತರ 18ನೇ ಪೀಠಾಧಿಪತಿಗಳು.**

| | | |
|---|---|---|
| **ಪೂರ್ವಾಶ್ರಮದ ಹೇಸರು** | – | ರಘುನಾಥಾಚಾರ್ಯರು |
| **ಪೂರ್ವಾಶ್ರಮದ ತಂದೆಯ ಹೆಸರು** | – | ಪುರುಷೋತ್ತಮಾಚಾರ್ಯ |
| **ಪೂರ್ವಾಶ್ರಮದ ತಾಯಿಯ ಹೆಸರು** | – | ಸತ್ಯಾದೇವಿ |
| **ಪೂರ್ವಾಶ್ರಮದ ತಮ್ಮಂದಿರು** | – | 1. ವ್ಯಾಸಾಚಾರ್ಯ<br>2. ನರಸಿಂಹಾಚಾರ್ಯ |
| **ಗೋತ್ರ** | – | ಮೌನಭಾರ್ಗವ ಗೋತ್ರ |
| **ಮಾವಂದಿರಗೋತ್ರ** | – | ಔರ್ವ |
| **ಜನ್ಮಸ್ಥಳ** | – | ಪುಣ್ಯಸ್ತಂಭ (ಪುಣತಾಂಬೇ, ಮಹಾರಾಷ್ಟ್ರ) |
| **ಆಶ್ರಮಸ್ವೀಕರಿಸಿದ ಸ್ಥಳ** | – | ಭಾಗಾನಗರ(ಮಹಾರಾಷ್ಟ್ರ) |
| **ಸಂಸ್ಥಾನ ಸ್ವೀಕರಿಸಿದ ವರ್ಷ** | – | ಬಹುಧಾನ್ಯ, 1638. |
| **ವಿದ್ಯಾಗುರುಗಳು** | – | ಕುಂಭಾರೀವಾಸುದೇವಾಚಾರ್ಯ |
| **ಆಶ್ರಮಗುರುಗಳು** | – | ಶ್ರೀಸತ್ಯವ್ರತತೀರ್ಥರು. |
| **ಜೇಷ್ಠಯತಿಗಳು** | – | ಶ್ರೀಸತ್ಯಪ್ರಜ್ಞತೀರ್ಥರು. |
| **ಇವರಿಂದ ಅಣುಸಂಸ್ಥಾನ ಪಡೆದವರು** | – | 1. ಸತ್ಯಾನಂದತೀರ್ಥರು<br>2. ಗುಣನಿಧಿತೀರ್ಥರು |
| | – | 3. ವ್ಯಾಸತೀರ್ಥರು |
| **ಆಶ್ರಮಸ್ವೀಕರಿಸಿದವರು** | | 1. ಮುನೀಂದ್ರತೀರ್ಥರು.<br>2. ಲಕ್ಷ್ಮೀಕಾಂತತೀರ್ಥರು<br>3. ಸುಮತಿಯತಿಗಳು |
| **ಮಹಾಸಂಸ್ಥಾನ ಪಡೆದ ಶಿಷ್ಯರು** | – | ಶ್ರೀಸತ್ಯನಾಥತೀರ್ಥರು |
| **ಸಮಕಾಲೀನ ಪೀಠಾಧಿಪತಿಗಳು** | – | ಶ್ರೀರಾಘವೇಂದ್ರಶ್ರೀಪಾದರು. |

| | | |
|---|---|---|
| ಮಂತ್ರೋಪದೇಶಪಡೆದವರು | – | ಛಲಾರಿಸಂಕರ್ಷಣಾಚಾರ್ಯ |
| ಸೈವಾ ಭಾಗ್ಯಪಡೆದ ರಾಜರು | – | ಅನಂತಪ್ರಬು – ಬಿಜಾಪುರ<br>ಸಂಭಾಜೀರಾಯ ಬಿಜಾಪುರ<br>ರಾಘವ ಪಂಡಿತ<br>ಚೆಂಜೀ – ಅನಂತಪ್ರಭು<br>ಆತನ ತಮ್ಮ ಕೇಶವರಾಯ<br>ಕೊಲ್ಲಾಪುರದ ದೊರೆ. |
| ವೃಂದಾವನವಿದ್ದ ಸ್ಥಳ | – | ನಿವೃತ್ತಿಸಂಗಮ (ಸಂಗಮೇಶ್ವರ)<br>ಕೃಷ್ಣಾನದಿ(ಸಪ್ತನದಿಗಳ ಬೀಡು) |
| ವೃಂದಾವನ ಪ್ರವೇಶ | – | ಶಾರ್ವರೀ ಸಂ. 1660<br>ಮಾರ್ಘಶೀರ್ಷ ಶುದ್ಧ ದಶಮಿ |
| ಈಗ ವೃಂದಾವನ ವಿರುವ ಸ್ಥಳ | – | ಕರ್ನೂಲ್ ಉತ್ತರಾದಿಮಠ |
| ವಿರಚಿಸಿದ ಗ್ರಂಥಗಳು | – | 1. ಪ್ರಕೃತಿ ಶೃತಿ ಸುಧಾ<br>2. ವಚನ ಪ್ರಸೂನ ಮಾಲಾ (ಅನುಪಲಬ್ಧ)<br>3. ವಾಯುಭಾರತೀ ಸ್ತೋತ್ರ |
| ಪ್ರತಿಷ್ಠಾಪಿಸಿದ ವಿಗ್ರಹಗಳು | – | 1. ಆಂಜನೇಯ (ತುಮಕೂರು)<br>2. ಕೇಶವದೇವರು (ಗುಂಟುರು)<br>3. ಆಂಜನೇಯ (ಕರ್ನೂಲ್)<br>4. ಕರಮುಗಿದ ಪ್ರಾಣದೇವರು (ಕರ್ನೂಲ್) |

**ಇವರ ಬಗ್ಗೆ ಇರುವ ಗ್ರಂಥಗಳು**

1. ಸತ್ಯನಿಧಿವಿಲಾಸ (ಪಂಡಿತರಾಜ ಶ್ರೀನಿವಾಸ ಕವಿಗಳು, )
2. ಗುರುವಂಶಕಥಾಕಲ್ಪತರು (ದೈವಜ್ಞ ಭೀಮಾಚಾರ್ಯ)
3. ಗುರುಪರಂಪರಾಸ್ತೋತ್ರ, (ಶ್ರೀಸತ್ಯಾಭಿನವರು.)

# ನಮೋವಾಕಂ ಪ್ರಶಾಸ್ಮಹೇ

ನನಗೆ ಶ್ರೀಸತ್ಯನಿಧಿಗಳ ಬಗ್ಗೆ ಬರೆಯಲು ಸ್ಫೂರ್ತಿನೀಡಿ ಗುರುಭಕ್ತಿ ಹುಟ್ಟಿಸಿ ಜ್ಞಾನದ ಬೆಳಕು ನೀಡಿದ ಮಹಾನುಭಾವರು ಶ್ರೀ ೧೦೦೮ ಶ್ರೀ ಸತ್ಯಪ್ರಮೋದ ತೀರ್ಥಶ್ರೀಪಾದಂಗಳವರು. ಉದ್ಗ್ರಂಥಗಳ ಪಾಠ ಹೇಳುತ್ತಾ ನಿರಂತರ ನನ್ನನ್ನು ತಿದ್ದಿ ಅನುಗ್ರಹಿಸುತ್ತಿರುವವರು ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದರು. ಖಂಡಿತವಾಗಿಯೂ ಹೇಳಿಕೊಳ್ಳುವಂತಹ ಯಾವ ಗುಣವೂ ನನ್ನಲ್ಲಿಲ್ಲ. ಉಭಯ ಶ್ರೀಪಾದಂಗಳವರ ಕಾರುಣ್ಯ ಮಂತ್ರಾಕ್ಷತೆಗಳ ಫಲವೇ ನಿಮ್ಮ ಮುಂದಿರುವ ಈ ಕೃತಿ. ಉಭಯ ಶ್ರೀಗಳ ಪಾದಾರವಿಂದಗಳಲ್ಲಿ "**ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಮ**" ಎಂಬ ವೇದವಚನವನ್ನಲ್ಲದೇ ಬೇರೇನನ್ನು ಅರ್ಪಿಸಲು ಅಸಮರ್ಥ.

ಶ್ರೀಸತ್ಯನಿಧಿವಿಲಾಸವ್ಯಾಖ್ಯಾನದ ಹಸ್ತಪ್ರತಿಯನ್ನು ನೀಡಿ ಆಶೀರ್ವದಿಸಿದ, ಪರಮಪೂಜ್ಯರಾದ, ವೇದಾಂತ ಗ್ರಂಥಗಳ ಉಪೇದಶನೀಡಿದ ವಾತ್ಸಲ್ಯ ಮೂರ್ತಿಗಳಾದ, ಶ್ರೀಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಪಂಡಿತ ಪೂಜ್ಯ ಗುತ್ತಲಾಚಾರ್ಯರ "**ಚರಣೌ ವಂದಾಮಹೇ ಸರ್ವದಾ**".

ಮುಂಬೈ ಶ್ರೀಸತ್ಯಧ್ಯಾನವಿದ್ಯಾಪೀಠದ ಕುಲಪತಿಗಳಾದ ಪಂ.ಪೂ. ಶ್ರೀಮಹಾಹುಲಿ ವಿದ್ಯಾಸಿಂಹಾಚಾರ್ಯರು ತಮ್ಮ ವಿದ್ಯಾಪೀಠದ ವತಿಯಿಂದ ಅಚ್ಚಾದ ಶ್ರೀಸತ್ಯನಿಧಿವಿಲಾಸ ಕಾವ್ಯದ (ಮೂಲಮಾತ್ರ) ಪುಸ್ತಕವನ್ನು ಕೊಟ್ಟಿದ್ದಾರೆ. ಪೂಜ್ಯ ಮಹಾಹುಲಿ ಆಚಾರ್ಯರಿಗೆ "**ಭೂಯೋ ಭೂಯೋ ನಮಾಮ್ಯಹಂ**".

ಪಂ.ಪೂ. ಶ್ರೀಸತ್ಯಧ್ಯಾನಾಚಾರ್ಯ ಕಟ್ಟಿ ಅವರು ಶ್ರೀಸತ್ಯನಿಧಿವಿಲಾಸ ಕಾವ್ಯದ ಹಸ್ತಪ್ರತಿಯನ್ನು ಕೊಟ್ಟು ಸಹಕರಿಸಿದ್ದಾರೆ. ಪೂಜ್ಯ ಕಟ್ಟೀ ಆಚಾರ್ಯರಿಗೆ "**प्रणमामि**".

ಅನೇಕ ಗ್ರಂಥಗಳನ್ನು ಪಾಠ ಹೇಳಿದ ಈ ಕೃತಿಯ ಬಗ್ಗೆ ಇರುವ ಅನೇಕ ಪ್ರಶ್ನೆಗಳಿಗೆ ಉತ್ತರನೀಡಿದ ಗುರುಗಳಾದ ಪಂ. ಶ್ರೀನಿವಾಸಾಚಾರ್ಯ ಆಲೂರ, ಪಂ. ಕೃಷ್ಣಚಾರ್ಯ, ಪಂ. ರಾಮಮೂರ್ತಿಚಾರ್ಯ ಹಾಗೂ ಪಂ. ನರಸಿಂಹ ಆಚಾರ್ಯ ಕಟ್ಟಿ ಇವರಿಗೆ "**ಸಹಸ್ರಶಸ್ಸನ್ನಮಾಮಿ**".

ನನ್ನ ದೊಡ್ಡಪ್ಪಂದಿರಾದ ಶ್ರೀರಾಮಮೂರ್ತಿ ಆಚಾರ್ಯ ಹಾಗೂ ಶ್ರೀಕೃಷ್ಣಮೂರ್ತಿ ಆಚಾರ್ಯ ಪಗಡಾಲ ಅವರು ನನಗೆ ಶ್ರೀಸತ್ಯನಿಧಿಗಳ ಬಗ್ಗೆ ಅನೇಕ ವಿಷಯಗಳನ್ನು ತಿಳಿಹೇಳಿ, ಕಳೆದ ೪೦–೫೦ ವರ್ಷಗಳಿಂದ ಸಂಗ್ರಹಿಸಿ–ಟ್ಟಿದ್ದ ಭಾವ ಚಿತ್ರಗಳನ್ನು ಕೊಟ್ಟು, ಭಕ್ತರಿಗೆ ಸಂಗಮೇಶ್ವರದ ಮತ್ತು ಶ್ರೀಸತ್ಯನಿಧಿಗಳ ವೈಭವ ತಿಳಿಯುವಂತೆ ಮಾಡಿದ್ದಾರೆ. ಅವರಿಗೆ "**ಶಿರ ಸಾಷ್ಟಾಂಗ ನಮಸ್ಕಾರಗಳು**".

---

# ಕೃತಜ್ಞತೆಗಳು

ನನ್ನ ಸಹಪಾಠಿಗಳಾದ ವಾದಿರಾಜಾಚಾರ್ಯ L.S ಹಾಗೂ ವಾಮನಾಚಾರ್ಯ ಆಲೂರು ಇವರಿಬ್ಬರೂ ಈ ಕೃತಿ ಹೊರಬರುವಲ್ಲಿ ಬಹಳ ಸಹಾಯ ಮಾಡಿದ್ದಾರೆ ಅವರಿಬ್ಬರಿಗೂ ನನ್ನ ಸ್ನೇಹಮಯ ಕೃತಜ್ಞತೆಗಳು.

ಗ್ರಂಥಕ್ಕೆ ಕೃತಿಪರಿಚಯವನ್ನು ತೆಲುಗು ಭಕ್ತರಿಗಾಗಿ ತೆಲುಗು ಭಾಷೆಯಲ್ಲಿ ಅನುವಾದ ಮಾಡಿಕೊಟ್ಟ ಗೋವರ್ಧನಾಚಾರ್ಯ-ರಿಗೂ ಆಂಗ್ಲ ಭಾಷೆಯಲ್ಲಿ ಅನುವಾದ ಮಾಡಿಕೊಟ್ಟ ಶ್ರೀಯುತ-ರಾದ ಕೇಶವರಾವ್ ಹಾಗೂ ಎನ್. ಗೋಪಿನಾಥ್ ಅವರಿಗೂ ನನ್ನ ಕೃತಜ್ಞತೆಗಳು.

ಈ ಕೃತಿ ಹೊರತ್ತಿರುವ ವಿಶ್ವಮಧ್ವಮಹಾಪರಿಷತ್ತಿನ ಎಲ್ಲ ಕಾರ್ಯಕರ್ತರಿಗೂ ಮತ್ತು ವಿಶೇಷವಾಗಿ ಆರ್ಥಿಕ ಸಹಾಯ ಮಾಡಿದ ಕೆ. ಭಾಸ್ಕರರಾಯರಿಗೂ ಹಾಗೂ ಕೆ. ಶ್ರೀಹರಿ ಇವರಿಗೂ ನನ್ನ ಕೃತಜ್ಞತೆಗಳು.

ಶ್ರೀಹರಿಯವರು ನನ್ನ ಆಪ್ತ ಸ್ನೇಹತರು. ಈ ಕೃತಿಗೆ ಮೊದಲಿನಿಂದಲೂ ಉತ್ತಮ ಸಲಹೆ, ಉತ್ತೇಜನ ನೀಡಿದವರೂ ಹೌದು.

ಅಂದವಾಗಿ ಅಕ್ಷರಜೋಡಣೆ ಮಾಡಿದ ಶ್ರೀಜಯತೀರ್ಥ ವಿದ್ಯಾಪೀಠದ ವಿದ್ಯಾರ್ಥಿಗಳಾದ  ಮಹಿದಾಸ ಜೋಶಿ, ಶ್ರೀಪತಿ ಉಮರ್ಜಿ ಹಾಗೂ ಆನಂದ ಚಿಂತಾಮಣಿ ಇವರಿಗೆ ದೇವರ ಪರಮಾನುಗ್ರಹ ಶ್ರೀಸತ್ಯನಿಧಿತೀರ್ಥ ಶ್ರೀಪಾದಂಗಳವರ ಪರಮಾನುಗ್ರಹವಾಗಲೆಂದು ಪ್ರಾರ್ಥಿಸುತ್ತೇನೆ.

ಶ್ರೀಕಾಂತ ಅವರಿಗೂ ಉಳಿದ ಜಯತೀರ್ಥವಿದ್ಯಾಪೀಠದ ಎಲ್ಲ ವಿದ್ಯಾರ್ಥಿ ಸಹೋದರರಿಗೂ ಭಗವಂತ ಅನುಗ್ರಹಿಸಲಿ. ಸುಂದರವಾಗಿ ಸಮಯಕ್ಕೆ ಸರಿಯಾಗಿ ಮುದ್ರಿಸಿದ ವಾಗರ್ಥ ಇವರಿಗೂ ನನ್ನ ಕೃತಜ್ಞತೆಗಳು.

# ಕೃತಿಪರಿಚಯ

ಇತಿಹಾಸವು ಭವಿಷ್ಯಕ್ಕೆ ಭದ್ರ ಬುನಾದಿ. ಆದರೆ ಜ್ಞಾನಿಗಳ ಇತಿಹಾಸವು ಬುನಾದಿ ಮಾತ್ರವಾಗದೆ ವಿಮುಕ್ತಿಗೆ ಸೋಪಾನವೂ ಆಗುತ್ತದೆ. ಇಂತಹ ಸ್ವರ್ಣ ಸೋಪಾನವೇ "**ಶ್ರೀಸತ್ಯನಿಧಿವಿಲಾಸ**"ವೆಂಬ ಕಾವ್ಯ. ಕವಿಗಳಾದ ಶ್ರೀನಿವಾಸಾ-ಚಾರ್ಯರು ಈ ಸೋಪಾನವೇರುವವರಿಗೆ ಅಲ್ಲಲ್ಲಿ ಕಾವ್ಯರಸವನ್ನು ಭಕ್ತಿಭಾವ-ದೊಂದಿಗೆ ಬೆರೆಸಿ ಶ್ಲೋಕಗಳಲ್ಲಿ ಸಂಗ್ರಹಿಸಿಟ್ಟಿದ್ದಾರೆ. ಶ್ರೀಮದ್ಭಾಗವತದ ದೃಷ್ಟಿ-ಯಲ್ಲಿ ಈತೆರನಾದ ಕಾವ್ಯಗಳೇ ನಿಜವಾದ ಕಾವ್ಯಗಳು. ಇಂತಹ ಕಾವ್ಯಗಳನ್ನು ಜ್ಞಾನಿಗಳೂ ಕಂಠ ತುಂಬಿ ಹಾಡುತ್ತಾರೆ. ಆನಂದ ಪಡುತ್ತಾರೆ. ಕೇವಲ ವರ್ಣ-ನಾತ್ಮಕವಾದ ಕಾವ್ಯವನ್ನು ಭಾಗವತವು "ವಾಯಸ ತೀರ್ಥ"ವೆಂದು ಟೀಕಿಸುತ್ತದೆ. ಜ್ಞಾನಿಗಳ ಒಲವು ಪಡೆದ ಶ್ರೀಸತ್ಯನಿಧಿವಿಲಾಸ ಕಾವ್ಯವು ಭಕ್ತರಿಗೆ ದಾರಿದೀಪ-ವಾಗುವುದರ ಜೊತೆಗೆ ಅನೇಕ ಐತಿಹಾಸಿಕ ಘಟನೆಗಳ ಮೇಲೆ ಬೆಳಕು ಚೆಲ್ಲಿ ಐತಿಹಾಸಿಕ ಗ್ರಂಥವೂ ಆಗಿದೆ. ಐತಿಹಾಸಿಕ ಘಟನೆಗಳನ್ನು ಪ್ರಸ್ತಾಪಿಸುವಾಗಲೂ ಕಾವ್ಯ ತನ್ನತನವನ್ನು ಕಳೆದುಕೊಳ್ಳದೇ ರಸಿಕರಿಗೆ ರಸದೌತಣವನ್ನು ಬಡಿಸುತ್ತಿದೆ. ತನ್ನ ಅಪೂರ್ವವಾದ ಉಪಮಾನ, ಉತ್ಪ್ರೇಕ್ಷೆಗಳಿಂದ ಕವಿಗಳಿಗೆ ಸವಾಲಾಗಿ ನಿಂತಿದೆ. ಅನೇಕ ವೃತ್ತಗಳಿಂದ ಶೋಭಿಸುವ ಈ ಕಾವ್ಯವು, ಕಾವ್ಯನಾಯಕನನ್ನು ಪ್ರತ್ಯಕ್ಷವಾಗಿ ಕಂಡು, ಪ್ರಾಮಾಣಿಕತೆಯನ್ನು ಪಡೆದುಕೊಂಡಿದೆ. ಶ್ರೀಸುಮಧ್ವ-ವಿಜಯದ ಶೈಲಿಯನ್ನು ಅವಲಂಬಿಸಿದ, ಈ ಕಾವ್ಯವು, ಮೊದಲು ರಾಮಾಯ-ಣವನ್ನು, ನಂತರ ಮಹಾಭಾರತವನ್ನು, ಶ್ರೀಮಧ್ವರ ಹಾಗೂ ಇತರ ಗುರುಗಳ ಚರಿತ್ರೆಯನ್ನು, ಸಂಕ್ಷೇಪವಾಗಿ ಮೂರು ಸರ್ಗಗಳಲ್ಲಿ ವರ್ಣಿಸಿ, ಮುಂದಿನ ಐದು ಸರ್ಗಗಳಲ್ಲಿ ಶ್ರೀಸತ್ಯನಿಧಿಗಳ ಚರಿತ್ರೆಯನ್ನು ನಮ್ಮ ಮುಂದೆ ತೆರೆದಿಟ್ಟಿದೆ.

ಇಲ್ಲಿ ಸತ್ಯನಿಧಿಗಳ ಪೂರ್ವಾಶ್ರಮದ ಊರು, ಮನೆತನ, ತಂದೆ, ತಾಯಿ, ಅವರ ಸ್ಥಿತಿ ಅವರ ಜೀವನದ ಬಗ್ಗೆ ವಿಸ್ತಾರವಾದ ಮಾಹಿತಿ ಸಿಗುತ್ತದೆ. ಶ್ರೀಸತ್ಯನಿಧಿಗಳು ಕೈಗೊಂಡ ಸಂಚಾರ, ಹೇಳಿದ ಪಾಠ,ಮಾಡಿದ ವಾಕ್ಯಾರ್ಥ, ಆಚರಿಸಿದ ಯಜ್ಞಗಳು, ನೀಡಿದ ದಾನ, ಸಿದ್ಧಿಸಿಕೊಂಡ ತಪಸ್ಸು, ಮುಂತಾದವು-ಗಳು ತುಂಬ ಸುಂದರವಾಗಿ ವರ್ಣಿತವಾಗಿವೆ. ಕವಿಗಳು ಅನೇಕ ವಿಷಯಗಳನ್ನು ಸಂಕ್ಷೇಪಿಸಿದ್ದಾರೆ. ಒಟ್ಟು ೮ ಸರ್ಗಗಳ ಈ ಕಾವ್ಯದಲ್ಲಿ ೫೧೧ ಶ್ಲೋಕಗಳಿವೆ.

ಎಂಟನೇ ಸರ್ಗದಲ್ಲಿ ಶ್ರೀಸತ್ಯನಿಧಿಗಳೇ ರಚಿಸಿದ ಆರ್ಯಾವೃತ್ತದಲ್ಲಿರುವ ಉಪದೇಶದ ಶ್ಲೋಕಗಳನ್ನು ಉದ್ಧರಿಸಿ, ಕವಿಗಳು ತಮ್ಮ ಕಾವ್ಯ ನರ್ತಕಿಗೆ ವಜ್ರಕಿರೀಟವನ್ನು ತೊಡಿಸಿದ್ದಾರೆ. ಇದರಿಂದ ತಮ್ಮ ಕಾವ್ಯಕ್ಕೆ ಸತ್ಯನಿಧಿಗಳ ಪೂರ್ಣ ಅನುಗ್ರಹವೂ ಇದೆ ಎಂದು ತೋರಿಕೊಂಡಿದ್ದಾರೆ.ವಿದರ್ಭಶೈಲಿಯನ್ನು ಅನುಸರಿಸಿದ ಕವಿಗಳು ಗುರುಗಳ ಪಾವನಚರಿತಾಮೃತಕ್ಕೆ, ಶಬ್ದಾಲಂಕಾರ, ಅರ್ಥಾಲಂಕಾರಗಳೆಂಬ ಕೇಸರಿ, ಏಲಕ್ಕಿ, ಕರ್ಪೂರಗಳನ್ನು ಬೆರೆಸಿದ್ದಾರೆ. ಹೀಗಾಗಿ ಓದಿದಷ್ಟು ಮತ್ತೆ ಓದಿಸುವ ಈ ಕಾವ್ಯವು ಅತ್ಯಂತ ರಮಣೀಯವಾಗಿ ಮೈದಾಳಿದೆ.

ಈ ಕೃತಿಯನ್ನು ರಚಿಸಿದವರು ಶ್ರೀಸತ್ಯನಾಥರ ಶಿಷ್ಯರಾದ ಶ್ರೀಶ್ರೀನಿವಾಸ ಕವಿಗಳು. ಇವರು ಶ್ರೀಸತ್ಯನಾಥರಿಂದ "ಪಂಡಿತರಾಜ"ನೆಂದು ಬಿರುದು ಪಡೆದ ವಿಷಯವನ್ನು ಪ್ರತಿಸರ್ಗದ ಅಂತಿಮ ಪದ್ಯದಲ್ಲಿ ಹೇಳಿಕೊಂಡಿದ್ದಾರೆ. ಇವರಿಗೆ ರಾಮಾಯಣದ ಕೀರ್ತನೆಯೆಂದರೆ ಪಂಚಪ್ರಾಣ. ಮೊದಲನೇ ಸರ್ಗವೇ ಇದಕ್ಕೆ ಸಾಕ್ಷಿ. ಇವರ ಬಗ್ಗೆ ಹೆಚ್ಚಿನ ಮಾಹಿತಿ ತಿಳಿದು ಬಂದಿಲ್ಲ. ಇದು ನಮ್ಮದೌರ್ಭಾಗ್ಯ.

ಇನ್ನು, ಸರ್ಗಗಳ ಸಾರಾಂಶವನ್ನು ಕಾಣೋಣ.

**ಮೊದಲನೇ ಸರ್ಗ** :- ರಾಮಾಯಣವನ್ನು ೭೮ ಶ್ಲೋಕಗಳಲ್ಲಿ ಸುಂದರವಾಗಿ ವರ್ಣಿಸಿದ್ದಾರೆ. ಇಲ್ಲಿ ದಶರಥನು, ತನ್ನ ಜ್ಯೇಷ್ಠ ಪುತ್ರನನ್ನು ರಾಮನೆಂದು ಕರೆದದ್ದಕ್ಕೆ ಕಾರಣವನ್ನು ನೀಡುತ್ತಾ ಮೂಲರಾಮದೇವರ ಕಥೆಯನ್ನು ಪ್ರಸ್ತಾಪಿಸಿದ್ದಾರೆ. ಸುಂದರವಾದ ಉಪಮಾನಗಳಲ್ಲಿ ರಾಮಾಯಣಕಥೆಯನ್ನು ಹೆಣೆದು ತಮ್ಮ ಅದ್ಭುತ ಕೌಶಲ್ಯವನ್ನು ತೋರಿದ್ದಾರೆ. ಅವುಗಳಲ್ಲಿ ಒಂದೆರಡನ್ನು ದೃಷ್ಟಾಂತದಲ್ಲಿ ಕಾಣೋಣ.

೧. ಸೀತಾಸ್ವಯಂವರದಲ್ಲಿ ಜನಕನು ರಾಮನನ್ನು ಕುರಿತು ಬಿಲ್ಲಿಗೆ ಹೆದೆ ಏರಿಸಲು ಹೇಳಿದಾಗ, ರಾಮನು ಶಿವಧನುಸ್ಸನ್ನು ಮುರಿದನೆಂದು ಕೇಳುತ್ತೇವೆ. ಕವಿಗಳು ಈ ಪ್ರಸಂಗವನ್ನು ಹೀಗೆ ಬಣ್ಣಿಸುತ್ತಾರೆ. ರಾಮನು ಧನುಸ್ಸನ್ನು ಮಾತ್ರ ಮುರಿಯಲಿಲ್ಲ, ಅಲ್ಲಿ ನೆರೆದಿರುವ ರಾಜರ ಮನಸ್ಸನ್ನೂ (ಸೀತಾಭಿಲಾಷೆಯನ್ನೂ) ಮುರಿದ. ಧನುಸ್ಸನ್ನೂ ರಾಜರ ಮನಸ್ಸನ್ನೂ ಒಟ್ಟಿಗೆ ಮುರಿದು ಸೀತೆಯನ್ನು ಕರೆದುಕೊಂಡು ಹೊರಟ ಎಂದು ವರ್ಣಿಸಿದ್ದಾರೆ. ಕೆಲವೆಡೆ ದೃಷ್ಟಾಂತದಿಂದ ತತ್ತ್ವಭವನವನ್ನು ನಿರ್ಮಾಣಮಾಡಿದ್ದಾರೆ.

೨. ಸೀತೆಯೊಡನೆ ರಾಮನು ಹೊರಟಾಗ ಪರಶುರಾಮನು ಎದುರಾದ ಪ್ರಸಂಗ. ಸೀತೆ ಮಿಂಚಿನ ಬಣ್ಣದವಳು. ರಾಮ ನೀಲಮೇಘಶ್ಯಾಮ. ಮಿಂಚಿ-ನೊಡನೆ ಹೊರಟ ಮೇಘಕ್ಕೆ ಪರ್ವತದಂತೆ ಪರಶುರಾಮನೆದುರಾದ ಎಂದು ಹೇಳಿದ್ದಾರೆ. ಮಿಂಚು ಮೊಡವನ್ನು ಬಿಟ್ಟು ಪ್ರತ್ಯೇಕವಾಗಿ ಇರಲಾರದು. ಅಂತೆಯೇ ಸೀತೆಗೆ ಎಂದಿಗೂ ರಾಮನ ಅಗಲಿಕೆಯಾಗದು. ಮೇಘಕ್ಕೆ ಪರ್ವತವೆದುರಾದರೆ ಘರ್ಷಣೆ ಅನಿವಾರ್ಯ. ಆದರಂತೆ ದಶರಥನ ಯಾವ ಪ್ರಯತ್ನದಿಂದಲೂ ರಾಮಪರಶುರಾಮರ ಕದನವಿಡಂಬನೆಯು ನಿಲ್ಲುವುದಲ್ಲ ಎಂದು ಕವಿಯ ಅಭಿಪ್ರಾಯ. ಹೀಗೇ, ಸಂಪೂರ್ಣವಾಗಿ ದೃಷ್ಟಾಂತಗಳಲ್ಲಿ ರಾಮಾಯಣದ ಕಥೆಯನ್ನು ಈ ಸರ್ಗದಲ್ಲಿ ನಮ್ಮ ಮುಂದೆ ಇರಿಸಿದ್ದಾರೆ.

**ಎರಡನೇ ಸರ್ಗ** :- ದ್ವಾಪರದಲ್ಲಿ ಮತ್ತೆ ದುಷ್ಟಶಕ್ತಿಗಳು ತಲೆ ಎತ್ತಿದಾಗ ಅವರನ್ನು ಬಗ್ಗು ಬಡೆಯಲು ರಾಮಚಂದ್ರನೇ ಕೃಷ್ಣನಾಗಿ ಅವತರಿಸಿದನೆಂದು ಹೇಳುತ್ತಾ, ಶ್ರೀಕೃಷ್ಣನ ಹಾಗೂ ಭೀಮಸೇನನ ಮಹಿಮೆಯನ್ನು ಇಲ್ಲಿ ವರ್ಣಿಸಿ-ದ್ದಾರೆ. ಉಪಮಾನಗಳಿಂದಲೇ ಕಾವ್ಯರಸವನ್ನು ಪುಷ್ಟೀಕರಿಸುವ ಶೈಲಿ ಇವರದು.

ಉದಾಹರಣೆಗೆ :- ಕೃಷ್ಣನು ಗೋಪಿಕೆಯರೊಡನೆ ಆಡಿದ ರಾಸಕ್ರೀಡೆಯ ಪ್ರಸಂಗ. ಅಲ್ಲಿ ಇವರು "रतिपतिं तनयं जनयन्निव" ರತಿಪತಿಯಾದ ಕಾಮನನ್ನೇ ಮಗನನ್ನಾಗಿ ಪಡೆಯುವಂತೆ (ಮಾಡಿಕೊಳ್ಳುವಂತೆ) ರಾಸಕ್ರೀಡೆ ಆಡಿದನೆಂದು ಚೇತೋಹಾರಿಯಾಗಿ ಶೃಂಗಾರವನ್ನು ಶೃಂಗಕ್ಕೇರಿಸಿದ್ದಾರೆ.

ಹೀಗೆ, ಶ್ರೀಕೃಷ್ಣನ ಕಥೆಯನ್ನು ಭೀಮನ ಲೀಲೆಗಳನ್ನು ದೃಷ್ಟಾಂತಗಳಲ್ಲಿ ಪೋಣಿಸುತ್ತಾ, ಆಚಾರ್ಯರ ಅವತಾರಕ್ಕೆ ಪೀಠಿಕೆ ಹಾಕಿದ್ದಾರೆ. ಮಧ್ವರ ಅವತಾರ, ಸರ್ವಮೂಲಗ್ರಂಥಗಳ ರಚನೆಯನ್ನು ವರ್ಣಿಸುತ್ತಾ ಪ್ರಾಸಂಗಿಕವಾಗಿ ಶ್ರೀಮೂಲರಾಮದೇವರ ಪ್ರತಿಮೆಯ ಬಗ್ಗೆ ಬೆಳಕು ಚೆಲ್ಲಿದ್ದಾರೆ.

**ಮೂರನೇಸರ್ಗ** :- ಶ್ರೀಮದಾಚಾರ್ಯರ ಬದರಿಕಾಶ್ರಮಪ್ರವೇಶದ ನಂತರ ಶ್ರೀಪದ್ಮನಾಭತೀರ್ಥರಿಗೆ ವೇದಾಂತ ಸಾಮ್ರಾಜ್ಯದ ಆಧಿಪತ್ಯ ಮುಂತಾದವು-ಗಳನ್ನು ಈ ಸರ್ಗದಲ್ಲಿ ವರ್ಣಿಸಿದ್ದಾರೆ. ಶ್ರೀಪದ್ಮನಾಭತೀರ್ಥರಿಂದ ಆರಂಭ-ಗೊಂಡು ಶ್ರೀಸತ್ಯವ್ರತತೀರ್ಥರ ವರೆಗೆ ಎಲ್ಲ ಗುರುಗಳ ಚರಿತ್ರೆಯನ್ನು ಸಂಕ್ಷೇಪ-ವಾಗಿಯೂ, ಕೆಲವು ಕಡೆ ವಿಸ್ತಾರವಾಗಿಯೂ ಹೇಳಿದ್ದಾರೆ. ಬಹಳ ಮಹತ್ವದ ವಿಷಯಗಳನ್ನೊಳಗೊಂಡ ಈ ಸರ್ಗದಲ್ಲಿ ಶ್ರೀಮದಕ್ಷೋಭ್ಯತೀರ್ಥರ ಹಾಗೂ

ವಿದ್ಯಾರಣ್ಯರ ವಾಕ್ಯಾರ್ಥವನ್ನು ವೇದಾಂತದೇಶಿಕರ ತೀರ್ಪಿನ ಶ್ಲೋಕವನ್ನು ಯಥಾವತ್ತಾಗಿ ಹೇಳದೇ, ಸ್ವಲ್ಪ ಬದಲು ಮಾಡಿದ್ದಾರೆ. ವೇದಾಂತದೇಶಿಕರ ತೀರ್ಪು.

"असिना तत्वमसिना परजीवप्रभेदिना ।
विद्यारण्यं महारण्यं अक्षोभ्यमुनिरच्छिनत्" ।।

ಬದಲಿಸಿದ ಪಾಠ

"असिना तत्वमसिना परजीवप्रभेदिना ।
अवैदिकोत्तमारण्यं अक्षोभ्यमुनिरच्छिनत्" ।।

ಎಂದು ಮೂರನೇ ಪಾದದಲ್ಲಿ ವಿದ್ಯಾರಣ್ಯ ಎಂಬ ಪದವನ್ನು ತೆಗೆದು ಅವೈದಿಕೋತ್ತಮ ಎಂಬ ಪದವನ್ನು ಇರಿಸಿದ್ದಾರೆ.

ಅಕ್ಷೋಭ್ಯತೀರ್ಥರು ವಿದ್ಯಾರಣ್ಯರನ್ನು ಖಂಡಿಸಿದರು ಎಂದರೆ, ತಪ್ಪಿ ವಿದ್ಯೆಗೆ ವಿರೋಧಿಗಳೆಂದು ಭಾಸವಾಗಬಹುದು. ಇದು ಕವಿಗಳು ಕಂಡ ಕಹಿ. ಆದ್ದರಿಂದ ಅವರು ಯಥಾರ್ಥಕ್ಕೆ ಒತ್ತು ಕೊಡಬೇಕಾಯಿತು. "अवैदिकोत्तमारण्यं" ಎಂದು ಸ್ವೀಕರಿಸಬೇಕಾಯಿತು. ಇದರಿಂದ ವಿದ್ಯಾರಣ್ಯರು ವೈದಿಕ ಮುಖವಾಡ ಹಾಕಿಕೊಂಡ ಅವೈದಿಕರು, ಪ್ರಚ್ಛನ್ನಬೌದ್ಧರು ಎಂದು ತೋರಿಸದಂತೆಯೂ ಆಗಿ, ಎಲ್ಲ ಅವೈದಿಕಮತವನ್ನು ನಿರಾಕರಿಸಿದರೆಂದು ತಿಳಿಸಿದಂತೆಯೂ ಆಗಿದೆ.

ಇತಿಹಾಸವನ್ನು ಯಥಾವತ್ತಾಗಿ ನಮ್ಮ ಮುಂದೆ ಇರಿಸಲು ಕವಿಗಳು ಮಾಡಿದ ಇನ್ನೊಂದು ಪ್ರಯತ್ನ. ಶ್ರೀವೇದನಿಧಿಗಳನ್ನು ವರ್ಣಿಸುವ ಪ್ರಸಂಗದಲ್ಲಿ ಬಾಲ-ಸರಸ್ವತಿಗಳು ಮಾಡಿದ ಪದ್ಯವನ್ನೇ ಕಾವ್ಯದಲ್ಲಿ ಇರಿಸಿದ್ದಾರೆ.

अन्या सन्यासवृत्तिस्ते श्रीमद्वेदनिधे गुरो ।
यतो युष्मत्पदा संगादुत्तमः पुरुषो भवत् ।।३।।

ವೇದನಿಧಿಗಳು ವ್ಯಾಕರಣಗ್ರಂಥವಾದ "ನ್ಯಾಸಕ್ಕೇ" ವೃತ್ತಿಯನ್ನು ಬರೆದಿದ್ದಾ-ರೆಂಬ ಅಪೂರ್ವ ವಿಷಯವನ್ನು ಬಾಲಸರಸ್ವತಿಯ ಮುಖದಿಂದ ನಮಗೆ ಹೇಳಿಸುತ್ತಾರೆ. ಇದು ಇತಿಹಾಸ ದಾಖಲಿಸುವವರಿಗೆ ಇರಬೇಕಾದ ಪ್ರಜ್ಞೆ.

ಮುಂದೆ ಸತ್ಯವ್ರತರ ಚರಿತ್ರೆಯನ್ನು ಹೇಳುತ್ತಾ, ಪರಂಪರೆಯ ಬಗ್ಗೆ ಮಾಹಿತಿ ನೀಡುವ ಈ ಸರ್ಗಕ್ಕೆ ಮಂಗಲ ಹಾಡಿದ್ದಾರೆ.

**ನಾಲ್ಕನೇ ಸರ್ಗ** :- ನಾಲ್ಕನೇ ಸರ್ಗದಲ್ಲಿ ಶ್ರೀಸತ್ಯನಿಧಿಗಳ ಪೂರ್ವಾಶ್ರಮದ ಬಗ್ಗೆ ವಿಸ್ತಾರವಾದ ಮಾಹಿತಿ ನೀಡಿದ್ದಾರೆ. ಶ್ರೀಸತ್ಯನಿಧಿಗಳ ಊರು, ಮಹಾರಾಷ್ಟ್ರದ ಪುಣ್ಯಸ್ತಂಬ. ಈಗ ಅದು ಪುಣೆತಾಂಬ ಆಗಿದೆ. ಅವರು ಮೌನಭಾರ್ಗವ ಗೋತ್ರದವರು. ಕೌಲಿಗಿ ವಂಶ. ಅಗ್ನಿಹೋತ್ರವಿಟ್ಟುಕೊಂಡ ಶುದ್ಧವಾದ ಪರಂಪರೆ ಇವರದು.ಇವರ ತಂದೆ ಪುರುಷೋತ್ತಮಾಚಾರ್ಯರು. ಉದ್ದಾಮ ಪಂಡಿತರು. ಇವರ ಬಗ್ಗೆ ಬರೆಯುವಾಗ ಕವಿಗಳ ಲೇಖನಿಗೆ ಎಲ್ಲಿಲ್ಲದ ಉತ್ಸಾಹ. ಆದರೆ, ಕಾವ್ಯದ ಇತಿಹಾಸದ ಬಿಗುವು ಬಿಡಲಿಲ್ಲ. ಅವರ ಅಧ್ಯಯನದ ಬಗ್ಗೆ ಒಂದು ಪದ್ಯವನ್ನು ಇರಿಸಿದ್ದಾರೆ.

**अंगानि वेदांश्च स धर्मशास्त्रं मीमांसया न्याययुतं पुराणं ।**
**अधीत्य विद्या वशमानिनाय चतुर्दशे वाम्बुजभूर्जगन्ति ।।**

ಶಿಕ್ಷಾದಿ ಷಡಂಗಗಳು, ನಾಲ್ಕು ವೇದಗಳು, ಮೀಮಾಂಸದ ಹರವು, ಪುರಾಣಗಳು, ಧರ್ಮಶಾಸ್ತ್ರದ ಮೊತ್ತ, ನ್ಯಾಯ ವಿಸ್ತಾರಗಳೆಲ್ಲ ಇವರ ತಲೆ ತುಂಬಿ ತುಳುಕಾಡುತ್ತಿದ್ದವು. ಆದರೆ ಅದ್ವಿತೀಯವಾದ ವಿಷ್ಣುಭಕ್ತಿ ಇವರದು. ಮಹಾಕರ್ಮಠರೂ ಹೌದು.

**तस्याग्नि होत्रेष्टिपशुप्रधानैः पूर्वोत्तराख्यैः प्रसितस्य यागैः ।**
**त्रेता सदेष्टा चरणेन तुष्टा ददावभीष्टानि मुहुः प्रियेव ।।**

ಇದು ಕವಿಗಳು ಇವರ ಬಗ್ಗೆ ಆಡಿದ ಮಾತು. ಇವರ ಮಡದಿ ಸತ್ಯಾದೇವಿ . ಯಜ್ಞದಲ್ಲಿ ದೀಕ್ಷಿತರಾದಂತೆ ಪಾಠಪ್ರವಚನದಲ್ಲಿಯೂ ಮಹಾ ದೀಕ್ಷಾಬದ್ಧರು. ಇವರು ದಾನದಲ್ಲಿಯೂ ಒಂದು ಕೈ ಮುಂದೆ तपो धनानां तपसा महत्वं अथश्चकारात्मगुणैरुदारैः ತಪಸ್ವಿಗಳು ತಮ್ಮ ತಪಸ್ಸಿನಿಂದ ಸಾಧಿಸಲಾಗದ ಮಹತ್ವವನ್ನು ತಮ್ಮ ಸ್ವಭಾವಗುಣಗಳಿಂದ ಪಡೆದ ಮಹಾತ್ಮರು ಎಂದು ಕವಿಗಳು ಮುಕ್ತಕಂಠದಿಂದ ಹೊಗಳಿದ್ದಾರೆ.ಇಂಥಹ ಆಚಾರ್ಯರಿಗೂ ಬಿಡದಿರುವ ಒಂದು ಚಿಂತೆ ಅದು ಸಂತಾನ ಚಿಂತೆ. ಶ್ರೀವಿದ್ಯಾಧೀಶರು ಸ್ವಪ್ನದಲ್ಲಿ ಅನುಗ್ರಹಿಸಿದರು. ಅವರ ಅಣತಿಯಂತೆ ಸತ್ಯಾದೇವಿ ಗರ್ಭಧರಿಸಿದಳು. ರಘುನಾಥರ ಉದಯವಾಯಿತು. ರಘುನಾಥನ ಬಾಲಲೀಲೆಗಳನ್ನು ವರ್ಣಿಸುತ್ತಾರೆ. ಕವಿಗಳಿಗೆ ವಿರೋಧಾಭಾಸ ಅಲಂಕಾರವೆಂದರೆ ಪರಮ ಪ್ರೀತಿ. ಇದಕ್ಕೊಂದು ದೃಷ್ಟಾಂತ.

**हाराभिरामोऽपि सबालको विहाराभिरामो नितरां बभूव ।**
**चिक्रीड लोकेऽप्रतिमोऽपि बालैः विचित्ररूपां प्रतिमां निधाय ।।**

ರಘುನಾಥನು ಹಾರದಿಂದ ಅಭಿರಾಮನಾದರೂ,ವಿಹಾರಗಳಿಂದಲೂ ಅಭಿರಾಮ. ಲೋಕದಲ್ಲಿ ಅಪ್ರತಿಮನಾದರೂ ಪ್ರತಿಮೆಗಳಿಂದ ಕೂಡಿ ಆಡುವವನು. ರಘುನಾಥನ ಉಪನಯನದ ವರ್ಣನೆಮಾಡಿ ಈ ಸರ್ಗವನ್ನು ಮುಕ್ತಾಯಗೊಳಿಸುತ್ತಾರೆ.

**ಐದನೇ ಸರ್ಗ** :- ಪುರುಷೋತ್ತಮಾಚಾರ್ಯರು, ಪ್ರಾಥಮಿಕ ಅಧ್ಯಯನ-ವನ್ನು ಮುಗಿಸಿದ ರಘುನಾಥಾಚಾರ್ಯರನ್ನು ಉನ್ನತ ಅಧ್ಯಯನಕ್ಕಾಗಿ ಕುಂಭಾರಿ ವಾಸುದೇವಾಚಾರ್ಯರ ಬಳಿ ಕಳುಹಿಸಿದರು. ಅಲ್ಲಿ ಅವರು ಸಂಪೂರ್ಣ ಪಾತಂಜಲಭಾಷ್ಯವನ್ನು, ಮೀಮಾಂಸಾಶಾಸ್ತ್ರವನ್ನು ಪ್ರಾಚೀನ ಹಾಗೂ ನವೀನನ್ಯಾಯವನ್ನು ಅಧ್ಯಯನ ಮಾಡಿದರು. ಮಧ್ವಶಾಸ್ತ್ರಸಾಗರದ ದಂಡೆಯನ್ನು ಬುದ್ಧಿನೌಕೆಯಿಂದ ತಲುಪಿದರು. ಸಾಂಖ್ಯ, ಪಾಶುಪತ, ಶಾಕ್ತ, ಮಿಥ್ಯಾವಾದ ಮೊದಲಾದ ದುರ್ಮತಗಳನ್ನು ದೂರೀಕರಿಸಲು ಅವುಗಳನ್ನು ಪರಿಶೀಲಿಸಿದರು. ಸರಸ್ವತಿಯ ಕರದಿಂದ ನುಡಿಸುವ ವೀಣೆಯ ಮಾಧುರ್ಯ-ವನ್ನು ಹೋಲುವ ಸಾಹಿತ್ಯದಲ್ಲೂ ಪರಿಣತರಾದರು.

ಹೀಗೆ ಸಮಸ್ತ ವಿದ್ಯಾಪರಿಪೂರ್ಣರಾದ ಪುತ್ರರಿಗೆ, ಪುರುಷೋತ್ತಮಾಚಾ-ರ್ಯರು ವಿವಾಹ ಮಾಡಲು ಬಯಸಿದರು. ಸ್ವಭಾವಿಕವಾಗಿ ವಿರಕ್ತರಾದ ಪುತ್ರನನ್ನು ವಿವಾಹಕ್ಕೆ ಒತ್ತಾಯದಿಂದ ಒಪ್ಪಿಸಬೇಕಾಯಿತು. ಔರ್ವ ಗೋತ್ರದ ತಮ್ಮ ಬಂಧುಗಳಾದ ರಘುವರ್ಯಾಚಾರ್ಯರ ಪುತ್ರಿಯೊಡನೆ ಮದುವೆಯನ್ನು ಮಾಡಿದರು. ರಘುವರ್ಯಾಚಾರ್ಯರ ಪುತ್ರಿ ಅತ್ಯಂತ ಸುಂದರಿಯಾಗಿದ್ದಳು. ಆದರೆ ರಘುನಾಥಾಚಾರ್ಯರ ವೈರಾಗ್ಯವು ಅಷ್ಟೇ ಅಕಾಟ್ಯವಾಗಿತ್ತು. ಇದನ್ನು ಕವಿಗಳ ಮಾತಿನಲ್ಲಿ ಹೇಳುವುದಾದರೆ, ಈಮೊದಲೇ ರಘುನಾಥಾಚಾರ್ಯರು ಒಬ್ಬಳ ಕೈ ಹಿಡಿದಿದ್ದರಂತೆ. ಆಕೆಯೇ ವಿರಕ್ತಿ. ಆಕೆಗೆ ಸವತಿಯಾಗಿ ಬಂದಳಂತೆ ಈ ರಘುವರ್ಯಾಚಾರ್ಯರ ಪುತ್ರಿ. ಆದರೂ ಆಕೆಯ ಸೌಂದರ್ಯಕ್ಕೆ ರಘುನಾಥಾಚಾರ್ಯರ ವೈರಾಗ್ಯವು ಕರಗಲಿಲ್ಲ. ರಘುನಾಥಾಚಾರ್ಯರ ಗಾರ್ಹಸ್ತ್ಯ ತುಂಬ ವಿಶಿಷ್ಟವಾಗಿದೆ. ಕೋಗಿಲೆಯು ಕೂಗಿ ವಸಂತನನ್ನು ಸ್ವಾಗತಿಸುವ ಕಾಲದಲ್ಲಿ ರಘುನಾಥರು ಅಗ್ನಿಹೋತ್ರವನ್ನು ಗ್ರಹಣಮಾಡಿದರು.

ಸೂರ್ಯನು ಅಸ್ತವಾಗುತ್ತಿರಲು ಮತ್ತು ಉದಯಿಸುತ್ತಿರಲು ನಿತ್ಯಾಗ್ನಿಹೋತ್ರದ ಅಗ್ನಿ, ಪ್ರಜಾಪತಿ, ಸೂರ್ಯ ಮತ್ತು ಪ್ರಜಾಪತಿಗಳಿಗೆ ಹಾಲಿನ ಹವಿಸ್ಸನ್ನು ನೀಡುತ್ತಿದ್ದರು. ದರ್ಶಪೂರ್ಣಮಾಸಗಳಲ್ಲಿ ಯಾಗಮಾಡಿ ಬ್ರಾಹ್ಮಣರಿಗೆ ಯಥೇಷ್ಟ ದಕ್ಷಿಣೆಯನ್ನು ಮೃಷ್ಟಾನ್ನವನ್ನೂ ನೀಡುತ್ತಿದ್ದರು. ಗ್ರೀಷ್ಮಋತು ಬರಲು ಪಶುಯಾಗವನ್ನು ಮಾಡುತ್ತಿದ್ದರು. ಚಾತುರ್ಮಾಸ್ಯದಲ್ಲಿ ವೈಶ್ವದೇವ, ವರುಣಪ್ರ–ಘಾಸ, ಸಾಕಮೇಧ, ಸುನಾಸೀರೀಯ ಎಂಬ ನಾಲ್ಕು ಯಾಗಗಳನ್ನು ಮಾಡುತ್ತಿ–ದ್ದರು. ವಸಂತಕಾಲದಲ್ಲಿ ಜ್ಯೋತಿಷ್ಟೋಮವನ್ನು, ವರ್ಷಕ್ಕೊಮ್ಮೆ "ದ್ವಾದಶಾಹ"ವನ್ನು ಹೀಗೆ ಎಲ್ಲ ಯಾಗಗಳನ್ನು ಭಗವಂತನ ಪ್ರೀತಿಗಾಗಿ ಮಾಡುತ್ತಿದ್ದರು. ಪ್ರತಿನಿತ್ಯವೂ ಶಿಷ್ಯರಿಗೆ ಮಧ್ವಶಾಸ್ತ್ರದ ಪಾಠವನ್ನು ಹೇಳುತ್ತಿದ್ದರು. ಈ ವಚನಾಮೃತ ಧಾರೆಯನ್ನು ಜಿಜ್ಞಾಸುಗಳು ತಮ್ಮ ಹೃದಯ ಶಿಂಪಿನಲ್ಲಿ ಹಿಡಿದರು. ಅಲ್ಲಿ ಅವುಗಳು ಮೌಕ್ತಿಕ ಭಾವವನ್ನು ಪ್ರಕಾಶಗೊಳಿಸಿದವು. ಮುಮುಕ್ಷುಗಳಿಗೆ ಬೇಕಾದ ಭಾವ ಅಂದರೆ, ಶಾಸ್ತ್ರಗಳ ತಾತ್ಪರ್ಯಗಳನ್ನು ಪ್ರಕಾಶಗೊಳಿಸಿದವು. ಕವಿಗಳು, ಕೋವಿದರು ಅವುಗಳನ್ನು ಕಂಠ ಮಣಿಗಳನ್ನಾಗಿ ಮಾಡಿಕೊಂಡರು. ಆಚಾರ್ಯರು ಪಾಠ ಹೇಳುವಾಗ ಕೊಪಗೊಳ್ಳುವವರಲ್ಲ. ಯಾರ ಸಂದೇಹವೂ ಉಳಿಯುತ್ತಿರಲಿಲ್ಲ.

ಇದು ವಿದ್ಯಾದಾನವಾದರೆ, ಇನ್ನು ಅನ್ನದಾನದ ಬಗ್ಗೆ ......

ಎಲ್ಲರಿಗೂ ಇಷ್ಟವಾದದ್ದು, ರಸದಿಂದ ಪುಷ್ಟವಾದದ್ದು, ಮೊಸರುತುಪ್ಪಗಳಿಂದ ಯುಕ್ತವಾದ ಯೋಗ್ಯವಾದದ್ದನ್ನೇ ಎಲ್ಲರಿಗೂ ದಾನ ಮಾಡುತ್ತಿದ್ದರು. ಯಾರಿಗೂ ಕದನ್ನವನ್ನು ನೀಡುತ್ತಿರಲಿಲ್ಲ. (ಇದು ಅಂದಿನಿಂದ ಇಂದಿನವರೆಗೂ ಸತ್ಯ.) ಈ ರೀತಿ ಗೃಹಸ್ಥಧರ್ಮವನ್ನು ಆಚರಿಸುವ ರಘುನಾಥಾಚಾರ್ಯರು ಉತ್ತರ ದಿಗ್ವಿಜಯಕ್ಕೆ ಹೊರಟುನಿಂತಾಗ ತಂದೆಗಳಿಗೆ ಮತ್ತೆ ಆರಂಭವಾಯಿತು ಚಿಂತೆ. ಇವರು ಹುಟ್ಟುವಮೊದಲೇ,"ಇವರು ಪೀಠಾಧಿಪತಿಗಳಾಗುತ್ತಾರೆ"ಎಂದು ವಿದ್ಯಾಧೀಶರು ಭವಿಷ್ಯ ನುಡಿದಿದ್ದರು. ಹೀಗಾಗಿ ಮಗನನ್ನು ತಡೆಯುವ ಹಾಗಿಲ್ಲ. ಮೌನದಿಂದಲೇ ಎಲ್ಲವನ್ನೂ ಸಹಿಸಬೇಕಾಗಿತ್ತು. ರಘುನಾಥಾಚಾರ್ಯರು ವಿರಕ್ತರಾದರೂ ನಿರ್ದಯಿಗಳಲ್ಲ. ಅವರು ತಂದೆಗಳ ಬಳಿ ಬಂದು, "ನಿಮಗೆ ನರಸಿಂಹಾಚಾರ್ಯರು ವ್ಯಾಸಾಚಾರ್ಯರು ಎಂಬ ಇಬ್ಬರು ಮಕ್ಕಳಾಗುತ್ತಾರೆ. ಅವರಿಂದ ವಂಶಾಭಿವೃದ್ಧಿಯಾಗುತ್ತದೆ". ಎಂದು ನುಡಿದು ಯಾತ್ರೆಗೆ ಹೊರಟರು.

ಅನೇಕ ಪ್ರೌಢಶಿಷ್ಯರನ್ನು ಕರೆದುಕೊಂಡು ನರ್ಮದಾನದಿಯನ್ನು ಆರಂಭ ಮಾಡಿ ಎಲ್ಲ ಕ್ಷೇತ್ರಗಳಿಗೂ ಪ್ರಯಾಣಬೆಳಿಸಿ, ಅಲ್ಲಿರುವ ವಾದಿಗಳನ್ನು ಸೋಲಿಸಿ,ಅವರನ್ನು ವೈಷ್ಣವರನ್ನಾಗಿ ಪರಿವರ್ತಿಸಿದರು. ಹೀಗೆ, ಎಲ್ಲ ಕಡೆ ಸಂಚಾರ ಮಾಡಿ ಕಡೆಗೆ ಪುರುಷೋತ್ತಮಕ್ಷೇತ್ರಕ್ಕೆ ಆಗಮಿಸಿ ಅಲ್ಲಿಂದ ಭಾಗಾನಗರಕ್ಕೆ ಬರುತ್ತಾರೆ. ಅಲ್ಲಿ ಶ್ರೀಸತ್ಯವ್ರತರಿಗೆ ಸಕಲಜಯಪತ್ರಗಳನ್ನು, ಯಾತ್ರಾಫಲವನ್ನು ಸಮರ್ಪಿಸುತ್ತಾರೆ. ಇದೆಲ್ಲ ಮಾಹಿತಿಯನ್ನು ಕವಿಗಳು ಅಚ್ಯುತಾಚಾರ್ಯರ ಹಾಗೂ ಶ್ರೀಸತ್ಯವ್ರತರ ಸಂವಾದದಲ್ಲಿ ನಮಗೆ ತಿಳಿಸುತ್ತಾರೆ. ಭಾಗಾನಗರದಲ್ಲಿಯೇ ಶ್ರೀಸತ್ಯನಿಧಿಗಳಿಗೆ ಆಶ್ರಮ ಎಂಬ ವಿಚಾರದೊಂದಿಗೆ ಮುಕ್ತಾಯಗೊಳ್ಳುತ್ತದೆ ಈ ಸರ್ಗ.

**ಆರನೇ ಸರ್ಗ** :- ಗುರುಗಳ ಚಾತುರ್ಮಾಸ್ಯ, ರಾಘವ ಪಂಡಿತನಿಂದ ಸತ್ಕಾರ, ಆಮೇಲೆ ಅನಂತಭೂಪನಿಂದ ಸತ್ಕಾರ ಇತ್ಯಾದಿಗಳೆಲ್ಲ ವಿಸ್ತಾರವಾಗಿ ವರ್ಣಿತವಾಗಿವೆ. ಕವಿಗಳು ಇಲ್ಲಿ ಶ್ರೀಸತ್ಯನಿಧಿಗಳ ವೈರಾಗ್ಯವನ್ನು ವರ್ಣಿಸಿದ್ದಾರೆ.

**ಏಳನೇ ಸರ್ಗ** :- ಚಂಜೀ ನಗರದ ವರ್ಣನೆ, ಅನಂತ ಪ್ರಭುವಿನ ವಿನಯ, ಸತ್ಯನಿಧಿಗಳ ನಿಸ್ಪೃಹತೆ ಇತ್ಯಾದಿಗಳು ವರ್ಣಿತವಾಗಿವೆ. ಸತ್ಯನಿಧಿಗಳು ಆತನಿಗೆ ಮಾಡಿದ ಅನುಗ್ರಹ ಶ್ಲೋಕವೊಂದನ್ನು ಇಲ್ಲಿ ಉದಾಹರಿಸಿದ್ದಾರೆ. ಆದರ ಮೇಲೆ ವಾಕ್ಯಾರ್ಥ ಆರಂಭವಾಗುತ್ತದೆ. ಸತ್ಯನಿಧಿಗಳು ಅಲ್ಲಿ ನೆರೆದ ಎಲ್ಲ ಪಂಡಿತರನ್ನು ಸೋಲಿಸುತ್ತಾರೆ. ಮಧ್ವಶಾಸ್ತ್ರದ ಜಯಭೇರಿಯನ್ನು ಮೊಳಗಿಸುತ್ತಾರೆ, ಅಲ್ಲಗೆ ಈ ಸರ್ಗವು ಮುಗಿಯುತ್ತದೆ.

**ಎಂಟನೇ ಸರ್ಗ** :- ಪಾದಯಾತ್ರೆಯನ್ನು ಕೈಗೊಂಡ ಶ್ರೀಗಳು, ಶ್ರೀಮುಷ್ಣ ಕ್ಷೇತ್ರಕ್ಕೆ ಆಗಮಿಸಿ, ಅಲ್ಲಿ ನೆರದಿರುವ ಪಂಡಿತರಿಗೆ ವೈರಾಗ್ಯೋಪದೇಶವನ್ನು ನೀಡುತ್ತಾರೆ. ಕವಿಗಳು ಆ ಶ್ಲೋಕಗಳನ್ನು ಈ ಸರ್ಗದಲ್ಲಿ ನಿಬಂಧನ ಮಾಡುವ ಮೂಲಕ ಗ್ರಂಥರೂಪದಲ್ಲಿ ನಮಗೆ ಉಪಲಬ್ಧವಾಗುವಂತೆ ಉಪಕಾರ ಮಾಡಿದ್ದಾರೆ.

ಒಂದೆರಡು ಸತ್ಯನಿಧಿಗಳ ಉಪದೇಶವನ್ನು ಕೇಳೋಣ.....

**निर्भरमपि निजगर्भं नियतं रक्षेत् प्रसूर्यदि प्रेम्णा ।**
**कुक्षिस्थं जगदेतत् रक्षेन्नित्यं जगन्निधिः सत्यं ।।**

ತಾಯಿಯು ದುರ್ಭರವಾದ ತನ್ನ ಗರ್ಭವನ್ನು ಪ್ರೀತಿಯಿಂದ ರಕ್ಷಿಸುವವ–

ಳಾದರೆ, ಸದಾ ನಿಷ್ಪ್ರಯತ್ನವಾಗಿ ತನ್ನ ಉದರದಲ್ಲಿ ನಮ್ಮನ್ನೆಲ್ಲಾ ಇಟ್ಟುಕೊಂಡ ಭಗವಂತ ನಮ್ಮನ್ನು ರಕ್ಷಿಸದಿಪ್ಪನೇ?

**वीचिषु विरतासु पुनर्वारिनिधौ स्नातुमीहमान इव ।**
**कृष्णं सेवितुमिच्छति मर्त्यस्तृष्णासु भोगशमितासु ।।**

"ಬಯಕೆಗಳು ಬಗೆಹರಿದ ನಂತರ ಭಗವಂತನನ್ನು ಭಜಿಸುವೆನೆಂಬುದು, ತರಂಗಗಳು ಶಾಂತವಾದ ಮೇಲೆ ಸಮುದ್ರಸ್ನಾನವನ್ನು ಮಾಡುತ್ತೇನೆ" ಎಂದು ಸಂಕಲ್ಪಿಸಿದಂತೆ. ಬಯಕೆಗಳು ಬಗೆಹರಿಯುವುದೆನಿತು?! ಅದಕ್ಕೆ ಕೊನೆ ಎಲ್ಲಿ? ಮೂಢ ! ಇಂದೇ ಈಗಲೇ ಭಗವಂತನನ್ನು ಸೇವಿಸು ಎಂದು ಎಚ್ಚರಿಸುತ್ತಾರೆ.

ಈ ರೀತಿ ೩೩ ಶ್ಲೋಕಗಳಲ್ಲಿ ವೈರಾಗ್ಯ ಸಾಗರವನ್ನು ಅಗಸ್ತ್ಯರಂತೆ ತಮ್ಮ ಈ ಪುಟ್ಟಕೃತಿಯಲ್ಲಿ ಸತ್ಯನಿಧಿಗಳು ಸಂಗ್ರಹಿಸಿದ್ದಾರೆ. ಶ್ರೀನಿವಾಸ ಕವಿಗಳು ತಮ್ಮ ಕಾವ್ಯ ಮಂಜೂಷೆಯಲ್ಲಿ ಅದನ್ನು ತೆಗೆದಿಟ್ಟು ನಮಗೆ ಕೊಟ್ಟಿದ್ದಾರೆ. ಹೀಗಾಗಿ ನಾವು ಅದನ್ನು ಕಂಡೆವು. ಶ್ರೀಸತ್ಯನಿಧಿಗಳು ಆನಂತರ ಶ್ರೀರಂಗಕ್ಕೆ ಹೋಗುತ್ತಾರೆ. ಅಲ್ಲಿ "ವಚನ ಪ್ರಸೂನಮಾಲಾ"ಎಂಬ ಶ್ರೀರಂಗ ದಂಡಕವನ್ನು ರಚಿಸುತ್ತಾರೆ. ಅದನ್ನು ಕವಿಗಳು ತಮ್ಮ ಕಾವ್ಯದಲ್ಲಿ ಹಿಡಿದಿಡಬಾರದಿತ್ತೇ ಎಂದೆನಿಸುತ್ತದೆ. (ನಮ್ಮ ಭಾಗ್ಯಕ್ಕೆ ಇಂದು ಅದು ಉಪಲಬ್ಧವಾಗಿಲ್ಲ.) ಮುಂದೆ ಸತ್ಯನಿಧಿಗಳು ಸಮಗ್ರ ದಕ್ಷಿಣ ಪಶ್ಚಿಮ ದೇಶಗಳನ್ನು ಸಂಚರಿಸಿ, ಉಡುಪಿಯಲ್ಲಿ ಅಷ್ಟಯತಿಗಳಿಂದ ಸನ್ಮಾನಿತರಾಗಿ ಕೃಷ್ಣನ ಪಾದಾರವಿಂದಗಳಲ್ಲಿ ತಮ್ಮ ಎಲ್ಲ ಕರ್ಮಗಳನ್ನು ಸಮರ್ಪಿಸುತ್ತಾರೆ. ಎಲ್ಲ ಜಯಪತ್ರಗಳನ್ನು ಕೃಷ್ಣಾರ್ಪಣವೆಂದು ಕೃಷ್ಣಾನದಿಯನ್ನು ಕುರಿತು ಪ್ರಯಾಣ ಮಾಡುತ್ತಾರೆ.ಇಲ್ಲಿಗೆ ಕಾವ್ಯ ಮುಗಿಯುತ್ತದೆ.

ಕವಿಗಳು ಶ್ರೀಸತ್ಯನಿಧಿಗಳ ಬಗ್ಗೆ ಪ್ರಚಲಿತವಿರುವ ಎಲ್ಲ ವಿಷಯಗಳನ್ನು ಸಂಗ್ರಹಿಸಿಲ್ಲ. ಅದಕ್ಕೆ ಕಾರಣವೂ ತಿಳಿಯುವುದಿಲ್ಲ. ಆದರೆ, ಇಂಥ ಕಾವ್ಯಗಳು ಬಹಳ ವಿರಳ. ಇದು ರಸಿಕರಿಗೆ ರಸದೌತಣ, ಇತಿಹಾಸ ಸಂಶೋಧಕರಿಗೆ ದಾರಿದೀಪ, ಭಾವುಕರಿಗೆ ಭಕ್ತಿಯ ಸೆಲೆ. ಸಾಧಕರ ಸಾಧನೆಗೆ ದರ್ಪಣ. ಕವಿಗಳಿಗೆ ಸವಾಲಾಗಿ ನಿಂತ ರಮಣೀಯ ಕಾವ್ಯ.

ಇದಕ್ಕೆ "ಸರ್ವತೋವಿಲಾಸ"ವೆಂಬ ವ್ಯಾಖ್ಯಾನವಿದೆ. ಅದನ್ನು ಬರೆದವರು ಲಕ್ಷ್ಮೀಶ್ವರ ನರಸಿಂಹಾಚಾರ್ಯರು, ಇವರು ಶ್ರೀಸತ್ಯನಾಥರ ಶಿಷ್ಯರು. ಇದನ್ನು

ಅವರು ತಮ್ಮ ವ್ಯಾಖ್ಯಾನದ ಕೊನೆಯಲ್ಲಿ ಹೇಳಿಕೊಂಡಿದ್ದಾರೆ. "इति श्रीसत्यनाथ श्रीचरणचरणाराधकलक्ष्मीश्वरनरसिंहकृतायांसत्यनिधिविलासटिकायां सर्वतोविलासाख्यायां" ಎಂದು. ಇದರಿಂದ, ಇವರು ಕವಿಗಳ ಸಮಕಾಲೀನರೆಂದು ತಿಳಿಯಬಹುದು, ಇವರ ಟಿಪ್ಪಣಿ ಅತ್ಯಂತ ಸರಳ, ಆದರೆ ಅಷ್ಟೇ ಮಹತ್ವದ್ದಾಗಿದೆ. ನಾಲ್ಕನೆ ಹಾಗೂ ಐದನೇ ಸರ್ಗದ ವ್ಯಾಖ್ಯಾನ ನೋಡಿದರೆ ಇದು ಸ್ಪಷ್ಟ. ಮೂಲದಲ್ಲಿ ಶ್ರೀಸತ್ಯನಿಧಿಗಳ ವಿದ್ಯಾಗುರುಗಳನ್ನು ವಾಸುದೇವಾಚಾರ್ಯರೆಂದು ಹೇಳಿದರೆ ಇವರು, ಅವರು "ಕುಂಭಾರೀ" ವಂಶದವರೆಂದು ತಿಳಿಸುತ್ತಾರೆ. ಹೀಗೆ ತುಂಬ ಮಹತ್ವದ್ದಾದ ಟಿಪ್ಪಣಿಯನ್ನು ರಚಿಸಿ ಉಪಕಾರಮಾಡಿದ್ದಾರೆ.

ಸಂಸ್ಕೃತ ಅರಿಯದ ಭಕ್ತರಿಗೆ ಅನುಕೂಲವಾಗಲೆಂದು ಕನ್ನಡದಲ್ಲಿ ಈ ಕಾವ್ಯದ ತಾತ್ಪರ್ಯವು ಬರೆಯಲಾಗಿದೆ. ಕನ್ನಡಿಗರಿಗೆ ಮೂಲದ ಭಾವವನ್ನು ವ್ಯಕ್ತಮಾಡುವಲ್ಲಿ ಈ ಕೃತಿ ಯಶಸ್ವಿಯಾದಲ್ಲಿ ನನ್ನ ಪ್ರಯತ್ನ ಸಾರ್ಥಕ.

ಶ್ರೀಸತ್ಯನಿಧಿಗಳಿಗೆ ಸಂಬಂಧ ಪಟ್ಟ, ನನ್ನ ಅಲ್ಪಮತಿಗೆ ತಿಳಿದ ಎಲ್ಲ ವಿಷಯಗಳನ್ನು ಈ ಕೃತಿಯಲ್ಲಿ ಸಂಗ್ರಹಿಸಿದ್ದೇನೆ. "आपरितोषात् विदुषां न साधुमन्ये प्रयोगविज्ञानं" ।

**ಜಯತೀರ್ಥಾಚಾರ್ಯ ಪಗಡಾಲ**

ಶ್ರೀಜಯತೀರ್ಥವಿದ್ಯಾಪೀಠ.

ಬೆಂಗಳೂರು –೪

# INTRODUCTION

History is a record of the life and achievements of mankind and provides a strong and secure foundation to the posterity, and the history of the lives of great sages is not only a secure foundation but also a golden ladder to attain salvation. One such golden ladder is the epic "Shri Satyanidhi Vilasa" written by Shri Srinivasacharya.

In his verses Shri Srinivasacharya has blended lyrical beauty with Bhakti. It is only such compositions which are considered to be true epics according to Shrimad Bhagavata. Such compositions are sung and enjoyed by great sages. According to Bhagavata if an epic has only literary beauty, it is called "Vayasa tirtha" meaning water sufficient only for a crow. It cannot quench the thirst of the soul.

"Shri Satyanidhi Vilasa" apart from being an authentic historical work, is such an epic which can guide devotees in the right direction. This work comprising many historical events has maintained the tempo of the entire epic in its narration of facts. It is a feast to the lovers of literature and philosophy. The readers are awe struck with the beauty of the figurative expressions and intricate metre in the verses. This composition gets its authenticity from the description of the hero by a poet who is his contemporary. The composition follows the style of "Sumadhva Vijaya". The first three cantos of this work briefly narrate the Ramayana, the Mahabharata and the lives of Shri Madhva and other gurus respectively. The remaining five cantos deal with the life of Shri

Sathyanidhitirtha giving details of his place of birth, parentage, the financial state. It also gives an account of Shri Satyanidhitirtha's tours(sancharas) the discourses he gave, the yajnas he performed, the charities he made and the penance, tapas he performed. But these are in brief.

This composition in eight cantos consists of 514 slokas. In the last canto, which is the crown of the epic, the writer has quoted some of the Upadesha shlokas of shri Sathyanidhitirtha which are set to "Arya Vrutta" metre. He has also given enough illustrations. By doing so the writer has made it obvious that he has special blessings of Shri Satyanidhitirtha. As has already been mentioned the writer has made the epic unique by using alliteration and pun which is like adding spices to the nectar of Guru Charitra. As a result one who reads it would like to read it again and again.

The writer of this epic Shri Srinivasacharya was the disciple of Shri Satyanathatirtha who gave him the title of "Panditharaja" which figures in the last shloka of every canto. That Acharya Srinivasa had a passion for the Ramayana is evident in the first canto. Unfortunately not many details about Shri Srinivasacharya are available. Let us now have a synopsis of each of the cantos.

Canto 1:

In this canto the story of the Ramayana is beautifully narrated in 68 shlokas. The writer while narrating why and how Dasharatha named his eldest son "Rama", also narrates the story of "Moola Rama". He has woven

lovely comparisions into the mainstream of the Ramayana with equally convincing instances and critical points.

First, in the episode of "Sita swayamvara", Janaka asked Rama to string the bow of Lord Shiva. Rama broke the bow while stringing it. This stringing of the bow is significant according to the author. He gives two meanings to it; one literal and the other metaphorical. The literal meaning is the actual breaking of the bow which metaphorically means that Rama broke the hearts of those kings who ardently wished to marry Sita, and thus shattered their hopes.

Second, he cites the episode of Parashurama's encounter with Rama. Rama was returning to Ayodhya after his marriage with Sita. Sita was as fair and bright as lightening and Rama was dark in complexion as a cloud. Black clouds are usually rain-bearing and the lightening provides a silver lining to them. As a cloud and the silver lining cannot be separated, so cannot Rama and Sita. Parashurama was like a mountain and as clouds dash against mountains when they come in the way, so had Rama to clash with Parashurama wich could not be prevented.

Canto 2:

In Dwaparayuga when evil forces started playing havoc again, Rama has born as Krishna. In this canto the author sings the praise of the power of Shri Krishna and Bhimasena. He has a unique style of making the lyrics appealing through figurative and illustrative examples. For instance let us look at the episode of "Rasakrida".

Here the author has made the "Shrungara Rasa" go to the zenith by saying that Krishna played "Rasakrida" with the Gopikas with such an emotional intensity that it looked as though it would result in the birth of "Kama" the lord of "Rati" as his son. Thus while stringing together the instances of the greatness of Krishna and "Leelas of Bhima" the author gives a prelude to the "Avatara" of "Shri Madhva" and the writing of the "Sarvamoola Grantha" and also throws light on the idol of "Shri Moola Rama Deva"

Canto 3:

In this canto the author has described the "Badarikashrama Pravesha" of Shri Madhvacharya and taking over of the charge of the "Vedanta Samrajya" by Shri Padmanabha Tirtha. He has also narrated the life histories of all the Gurus from Shri Padmanabha Tirtha to Shri Satyavrata Tirtha, in detail in some places, and briefly in some others. This canto consists of certain very important topics. For instance, the author has made a little change to the famous victory shloka "Asina Tattvamasina..." of "Shri Akshobhya Tirtha" which he felt would be very effective. This is the shloka, which captures the final verdict of "Shri Vedanta Deshika", about the debate that took place between "Shri Akshobhya Tirtha" and "Vidyaranya". The original verdict is

"असिना तत्वमसिना परजीवप्रभेदिना ।
विद्यारण्यं महारण्यं अक्षोभ्यमुनिरच्छिनत्" ।।

but the changed one is

"असिना तत्वमसिना परजीवप्रभेदिना ।
अवैदिकोत्तमारण्यं अक्षोभ्यमुनिरच्छिनत्" ।।

He substituted the word "Vidyaranya" with the word "Avaidikottama". If he said that "Akshobhya Tirtha" criticised "Vidyaranya" it would be misinterpreted as his being against "Vidya". The writer was able to anticipate this delicate problem and so he used the label "Avaidikottama" in a clever manner meaning the best of "Avaidikas". The label served the purpose of making it clear that "Vidyaranya" was "Avadikottama" in the guise of "Vaidika" and was a Buddhist inwardly. This also serves the purpose of bringing out the truth by rejecting all the "Avaidikas". The author has also been successful in being conscious of upholding the authenticity of history by citing the original shloka of "Balasaraswathi" while describing "Shri Vedanidhitirtha" which says that Shri Vedanidhiritha wrote "Vritti" a commentary to "Nyasa" a great book of Grammar. The shloka is

अन्या सन्यासवृत्तिस्ते श्रीमद्वेदनिधे गुरो ।
यतो युष्मत्पदा संगादुत्तमः पुरुषो भवत् ।।३।।

The author concludes this canto with the biography of "Shri Satyavrata" and a detailed account of the lineage of the Gurus.

Canto 4:

In this canto, the author has described the life of "Shri Satyanidhitirtha" before he took sanyasa. Shri Satyanidhitirtha's native place was "Punyasthambha" in Maharashtra which has now changed to "Punithamba".

He belongs to the "Kowlgi" family and "Mouna Bhargava Gothra". Their family was known for a very pious lineage and for performing "Nityagnihotras", the compulsory daily fire sacrifices. His father was Shri Purushottamacharya, a great scholar. The author feels highly overwhelmed when he writes about him but never deviates from the grip and seriousness of his composition and its tempo. He wrties about Shri Purushottamacharya's scholorship thus...

अंगानि वेदांश्च स धर्मशास्त्रं मीमांसया न्याययुतं पुराणं ।
अधीत्य विद्या वशमानिनाय चतुर्दशे वाम्बुजभूर्जगन्ति ।।

Acharya was well versed in "Sikshaadi Sadaagamas", the four "vedas", "The scope of Mimamsa", the "Puranas", "Dharmashastra's" and "Nyaya". He was a great devotee of Lord Vishnu, was very pious and austere. The author says...

तस्याग्नि होत्रेष्टिपशुप्रधानैः पूर्वोत्तराख्यैः प्रसितस्य यागैः ।
त्रेता सदेष्टा चरणेन तुष्टा ददावभीष्टानि मुहुः प्रियेव ।।

His wife was Satya Devi. He was highly devoted in performing the "Yajnas" and also an equally devoted Guru. He was extremely charitable तपो धनानां तपसा महत्त्वं अधश्चकारात्मगुणैरुदारैः The Acharya attained the greatness and the power, which the sages could not achieve and attain with their penance, by the strength of his personality and conduct.

Such a great man was bagged with the worry of not having a child. At last his wish was fulfilled when Satyadevi gave birth to Raghunatha with the blessings of

Shri Vidyadeesha who appeared in his dream.

The writer is very found of "Virodhaabhasa alankara". He says,

हाराभिरामोऽपि सबालको विहाराभिरामो नितरां बभूव ।
चिक्रीड लोकेऽप्रतिमोऽपि बालैः विचित्ररूपां प्रतिमां निधाय ।।

Meaning that Raghunatha was handsome both with or without any ornaments (Haara,Vihaara); was unparalled(Aprathima) but was playing with idols (Prathima's), which shows that he was like any other normal child. This canto ends with the narration of the Upanayanam of Raghunatha.

Canto 5:

Purushottamacharya sent his son to Kumbhari Vasudevachar for higher studies after the boy had finished his primary education. There he studied "Patanjala Bhashya", "Mimamsa Shastra", both old and new Nyaya Shashtra's. He was able to cross the ocean of Madhva Shastra and reach the shores in the ship of intelligence. He examined "Sankhya, Pashupata, Shaakta,Mithyavaada" etc., the "Durmathas" in order to ward them off. He became well versed in literature, which was as wonderful and sweet, as the music played by Goddess Saraswati in her Veena.

Purushottamacharya wanted to celebrate his son's marriage. But as Raghunathacharya was averse to getting married, Purushottamacharya had to perform the most difficult task of convincing his son to get married. Raghunathacharya finally married the daughter of

Raghuvaryacharya, one of his relatives belonging to "Ourva Gothra". The bride was very beautiful but Raghunathacharya's vairagya was equally strong. Here the author gives a wonderful analogy. He says that Raghunatha first married "Virkati" most willingly but was later forced into the worldly wedlock with the daughter of Raghuvaryacharya which proved charmless. The writer interprets this as his second marriage, the first being with Virakti. The second wife's beauty could not attract him towards her. He was unperturbed and never shunned his conviction.

Raghunathacharya's married life "Grihasthashrama" is very unique. During the spring season - "Vasantha Kaala" welcomed by the Cuckoo, he adopted "Agnihotra". At the sunrise, he offered the "Havis" with milk to Surya and Prajapathi and at sunset to "Agni" of "Nityagnihotra" and Prajapathi. During "Darsha-poorna maasa" he performed yagas and fed the Brahmins with sumptous food and gave them abundant dakshinas. During the summer(Greeshma Ritu), he did "Pashu Yaga". During the "Chaturmaasa" he performed four yagas called "Vaishvadeva" ,"Varuna Praghasa", "Saka medha", "Sunaasiriya". During the "Vasantha Ritu" he performed "Jyotishtoma" and "Dwadashaaha" once every year. All these he did with a will of total surrender to the Almighty. He taught "Madhva Shastra" to his disciple's everyday. He was always patient and never lost his temper.

The essence of his discourses, which was like nectar,

was collected and preserved in the hearts of those who were thirsty for his knowledge. The essence of his teachings and discourses imparted the knowledge needed for salvation and those who needed it benefited. Poets and the scholars preserved them carefully as precious gems. He was and ideal "guru" doing the "vidyaadaana". Let us take a look at his "Anna Daana". He did "Annadaana" whole-heartedly. He used to feed his guests very nutritious, sumptous and tasty food. Never did he give any stale or unwanted food. This tradition is being followed in the Mutt even to this day. He was a perfect "Gruhastha" following the "Gruhasthashrama Dharma".

Purushottamacharya was very worried when his son Raghunathacharya decided to set out an "Uttara Digvijaya". His anxiety was not without reason. Vidhyadeeshatirtha who blessed him with this son told him that his son would one day become a "Sanyasi" and a "Peethadhipathi". Hence he could not prevent his son from undertaking this journey. He had to swallow his grief silently. Though Shri Raghunathacharya was a "virkata", he was not heartless. He went to his father before his departure and said that he (i.e. his father) would be blessed with two more sons Narasimhacharya and Vyasacharya and their progency would flourish. Afterwards, along with some of his best disciples he went on a piligrimage to all the holy places. Wherever he went he held discourses, discussions and debates with many knowledgeable people and defeated them in the verbal combats with his exemplary power of knowledge and oratory. He converted them into "Vaishnavites".

Lastly, he went to Purushottama Kshetra and from there to Bhaganagara. Here he dedicated all the certificates of his victory and the "Yatraphala" to Shri Sathyavratha Tirtha. All this information is given to us thorugh a conversation between Shri Achyuthacharya and Shri Sathyavratha Tirtha. Shri Raghunathacharya took sanyasa in Bhaganagara itself. With this the fifth canto ends.

Canto 6:

This canto gives a vivid description of Shri Sathyanidhitirtha's "Vairagya". It describes the Chaturmasya of Swamiji and the honours he got from Raghava Pandita and the king Anantha Bhupa.

Canto 7:

This canto gives a description of the town of Chenji, the modesty and humility of Anantha Bhupa and the detachment of Shri Satyanidhi Tirtha. Further one of the Anugraha Shlokas bestowed on Ananta Bhupa by Shri Sathyanidhitirtha is also discussed. Later the "Vakyartha" of this shloka starts and the discussion is carried on Shri Sathyanidhi defeats all the scholars assembled there and the canto ends with a slogan of triumph of "Madhva shastra".

Canto 8:

Undertaking a "paada yaatra" the swamiji reaches "Shri Mushna". He preaches "Vairagya" to the scholars there. The author has done a commendable job by compiling these shlokas in this canto so that they are

available to us in the form of a book.

Let us now go through a couple of these shlokas.

निर्भरमपि निजगर्भं नियतं रक्षेत् प्रसूर्यदि प्रेम्णा ।
कुक्षिस्थं जगदेतत् रक्षेन्नित्यं जगन्निधिः सत्यं ।।

When a mother can bear a child and protect it with love and affection in spite of several difficulties can't God who bears us in his stomach protect us? - Meaning certainly he would.

वीचिषु विरतासु पुनर्वारिनिधौ स्नातुमीहमान इव ।
कृष्णं सेवितुमिच्छति मर्त्यस्तृष्णासु भोगशमितासु ।।

If we say that we would pray to God and surrender to HIM after our desires are fulfilled is like saying that we would have a bath in the sea after the waves calm down. Can waves stop rolling?

O, fool! start surrendering to God right now. This is the warning given by Swamiji to us. Thus Shri Sathyanidhitirtha has compiled the ocean of Vairagya in 32 shlokas as Agasthya did by having the ocean in his palms. In turn, Shri Srinivasacharya has preserved these 32 shlokas which are like precious pearls, in his jewel box called "Shri Satyanidhi Vilasa". But for this precious compilation, we would have been deprived of seeing this original work of Shri Satyanidhi Tirtha and benefiting from it. Later Shri Satyanidhitirtha leaves from Shrirangam. There he composes "Sriranga Dandaka" named "Vachana Prasoona Mala". How we wish the poet had preserved these in his composition!

"Vachana Prasoona Mala" is unfortunately not available now.

Later Shri Satyandihi Tirtha tours the south and west of Bharat. He is honoured and felicitated by the "Ashta Yati's" of Udupi. He dedicates everything that he has achieved at the lotus feet of Lord Shri Krishna. Then he continues his journey towards the river Krishna. With this the epic comes to an end.

The author has not compiled all the well known details of Shri Satyanidhi Tirtha in his work. The reason for doing so is not known. However this is a very rare work. This is read and enjoyed by all types of people. For researchers of history this book is a guide. For lovers of poetry it is highly fascinating. For the emotional people this is a fountain of Bhakti and for the pursuers of Vairagya and Bhakti this book is like a mirror. This book invokes awe in all the poets and throws a challenge to them.

There is a commentary available on this book named "Sarvathovilasa" written by Lakshmeeshwara Shri Narasimhacharya, a disciple of Shri Sathyavratha Tirtha. This he has mentioned in the last of "Sarvatho Vilasa" "इति श्रीसत्यनाथश्रीचरणचरणाराधकलक्ष्मीश्वरनरसिंहकृतायांसत्यनिधिविलासटिकायां सर्वतोविलासाख्यायां". This throws light on the fact that both the writers were contemporaries.

Narasimhacharya's commentary is easy to understand but it is very significant. This is evident when we study the commentary on the 4th and 5th cantos. The name of

Shri Sathyanidhi Tirtha's Guru has been given as Kumbhari Vasudevacharya in the commentary, but in the original it is mentioned only as Vasudevacharya. This makes it clear that Narasimhacharya wrote the commentary with greater details and care. This is a great service.

To facilitate the understanding of the work by devotees who do not know Sanskrit. I have given the summary of the shlokas in Kannada. If the translations are able to express the original intention of the sanskrit shlokas to the readers, I will feel that my efforts have borne fruit.

I have compiled the details of Shri Satyanidhi Tirtha in this book to the best of my knowledge.

"आपरितोषात् विदुषां न साधुमन्ये प्रयोगविज्ञानं" ।

---

# ఉపోద్ఘాతము

ఇతిహాసము భవిష్యమునకు పునాది వంటిది. కాని, జ్ఞానుల ఇతిహాసము పునాది మాత్రమే గాక భవిష్యత్తునకు సోపానరూపముగ నున్నది. ఇటువంటి స్వర్గసోపానమే ఈ సత్యనిధి విలాస కావ్యము. ఈ సోపానము నధిరోహించువారికి కావ్యరసముతో బాటు భక్తి రసమును రంగరించి రసరమ్య కావ్య భోజనమును చేయించిరీ కావ్యరచయితలు. భాగవతపు దృష్టిలో ఇటువంటి కావ్యములే నిజమైన కావ్యములు. ఇచ్చటనే జ్ఞానులు ప్రవేశించెదరు. ముక్త కంఠముతో పాడెదరు. కేవలము వర్ణనలతో నిండిన కావ్యములను వాయసతీర్థములని (కాకులు స్నానమాడు జలాశయము) భాగవతము నిందించును.

ఈ కావ్యము కేవలము భక్తులకు దారి దీపముగనే గాక, అనేక ఐతిహాసిక ఘటనలను వివరించుటద్వారా ఐతిహాసిక గ్రంథముగ నిలచియున్నది. ఐతిహాసిక ఘటనలను ప్రస్తావించునపుడు గూడ సుందర కవితా శైలితో రసజ్ఞులను రంజింపజేయునదీ కావ్యము. అద్భుతములైన ఉత్ప్రేక్షములతో, రమ్యములైన ఉపమానములతో అసాధారణ కావ్యముగ అలరాలునదీ కావ్యరాజము. అంతేగాక, కావ్యనాయకులను గాంచిన కావ్యము గావున అత్యంత ప్రామాణికమైనదనుట దీని వైశిష్ట్యములలో ముఖ్యమైనది. (శ్రీసత్యనిధి తీర్థుల సమకాలీనులు ఈ కావ్యరచయితలైన శ్రీ శ్రీనివాస కవులు)

శ్రీసుమధ్వవిజయ కావ్యపుశైలి ననుసరించిన ఈ కావ్యము మొదట రామాయణమును, తరువాత మహాభారతమును, మధ్వాచార్యుల మరియు అందరు గురువుల సంక్షిప్త చరిత్రను తెలిపి, చివరన 5 సర్గలలో శ్రీ సత్యనిధి తీర్థుల చరితను మనకు అందించును. ఇచ్చట శ్రీసత్యనిధి తీర్థుల పూర్వాశ్రమపుగ్రామము, వారి పూర్వీకులు, వారి తల్లి దండ్రులు, వారి జీవనముల గురించి విస్తారమైన వివరములు దొరకును. శ్రీపాదుల వారి సంచారము, పాఠప్రవచనములు, వాక్యార్థములు, చేసిన యజ్ఞములు, దానము, తపస్సు మున్నగు వానిని సుందరముగ సంగ్రహించి వివరించుటను గాంచవచ్చును.

8 సర్గముల ఈ కావ్యము 514 శ్లోకములతో కూడినది. 8వ సర్గయందు శ్రీ సత్యనిధి తీర్థులే రచించిన ఆర్యావృత్తపు ఉపదేశపు శ్లోకములను ఉదాహరించిన ఈ రచయిత, తమ కావ్య నర్తకికి వజ్రకిరీటమును తొడగిరి. దీని వలన వీరి కావ్యమునకు శ్రీ సత్యనిధి తీర్థుల

ఆశీర్వాదము గూడగలదని నిరూపించిరి. సరళ సుందరశైలిననుసరించిన ఈ కవివర్యులు, గురువుల పావన చరితా మృతమునకు శబ్దాలంకార, అర్థాలంకారములనెడి సుగంధద్రవ్యములను చేర్చి దీనినొక రమణీయ కావ్యముగ మలచిరి.

ఈ కృతికర్తలైన శ్రీ శ్రీనివాస కవులు, శ్రీ సత్యానాథ తీర్థుల శిష్యులు. తమ గురువులచే పండితరాజ అని బిరుదుపొందిన విషయమును వీరు ఈ కావ్యమునందు తెలుపుకొనిరి. వీరి గురించి ఎక్కువ వివరములు తెలియరావు. వీరికి రామాయణమనగ ప్రాణప్రియమని ఈ కావ్యపు మొదటి సర్గద్వారా తెలియును. ఇక ఈ కావ్యపు సర్గములసారాంశమును తెలిసికొనెదము.

మొదటి సర్గయందు రామాయణమును 68 శ్లోకములందు సంగ్రహించిరి. ఇచ్చట దశరథుడు, తన జ్యేష్ఠపుత్రుని రాముడని పిలుచుటకు కారణమును చెప్పుచు, మూలరాముని కథను ప్రస్తావించిరి. సుందరములైన ఉపమానములతో రామాయణ కథను అద్భుతముగ వర్ణించి తమ కౌశలమును ప్రదర్శించిరి. వీని యందు ఒకటి రెండు ఉదాహరణలను చూతముగాక,

1) సీతాస్వయంవర సందర్భమందు జనకుని వచనానుసారముగ విల్లును ఎక్కుపెట్టిన శ్రీరాముడు, కేవలము ఆ వింటినే గాక అచ్చటి సభాసదులైన రాజుల మనస్సులను గూడ విరచి, సీతాదేవిని చేపట్టెనని సుందరముగ వర్ణించెదరు.

2) శ్రీరాముడు సీతాసమేతుడై అయోధ్యా నగరికి వెడలునపుడు పరశురాముడు ఎదురైన సందర్భము. సీతాదేవి మెరుపురంగుమేని ఛాయగలది. రాముడు నీలమేఘ శ్యాముడు. మెరుపుతో గూడిన మేఘమునకు పర్వతమువలె పరశురాముడు ఎదురాయెనని వర్ణించిరి. సుందరమైన వర్ణన ఇది. మెరుపు మేఘమును వదలి ఉండలేదు. అట్లే సీతారాములకు వియోగము లేదు. అంతేగాక - మేఘమునకు పర్వతము ఎదురైనచో ఘర్షణ అనివార్యము. అట్లే దశరథుడు ఎంత ప్రయత్నము చేసినను, రామ పరశురాముల ఘర్షణ అనివార్యమని కవియొక్క అభిప్రాయము.

ఈ విధముగ అనేక దృష్టాంతములతో సుందరముగ రామాయణ కథను నిరూపించిరి.

ఇక రెండవ సర్గయందు - ద్వాపరయుగము నందు శ్రీరాముడే

శ్రీకృష్ణుడుగ అవతరించి దుష్ట శిక్షణ చేసెనని వివరించుచు, శ్రీకృష్ణుని మరియు భీమసేనుని మహిమను ఉపమాలంకారములతో సుందరముగ వర్ణించిరి.

ఒక్క ఉదాహరణను గమనించిన, శ్రీకృష్ణుని రాసక్రీడా సందర్భము. దీనిని వర్ణించుచు ***రతిపతిం తనయం జనయన్నివ*** (రతిపతియైన మన్మథునే పుత్రునిగ పొందునట్లు రాసక్రీడను నడపెను) అని రస రమ్యముగ శృంగారమును శృంగమున కెత్తినిలపిరి.

ఈ విధముగ శ్రీకృష్ణకథనం, భీముని లీలలను తమ కావ్యచాతుర్యముతో వివరించి, మధ్వావతార పీఠికను, అవతారమును గ్రంథరచనను వర్ణించుచు, ప్రాసంగికముగ మూలరాముని ప్రతిమ గురించి తెలియజేసిరి. శ్రీమదాచార్యుల బదరికాశ్రమ ప్రవేశము, పద్మనాభతీర్థులకు వేదాంత సామ్రాజ్య పట్టాభిషేకము - మొదలగు విషయములను ఈ సర్గమునందు వర్ణించిరి.

ఇక మూడవ సర్గయందు -

శ్రీపద్మనాభతీర్థుల నుండి మొదలుకొని శ్రీ సత్యవ్రత తీర్థుల వరకు సమస్త గురువుల చరిత్రను సంక్షేపముగ, కొలది చోట్ల విస్తారముగను వర్ణించిరి. అనేకములైన అపూర్వ విషయములతో గూడిన ఈ సర్గమునందు, శ్రీ అక్షోభ్యతీర్థుల మరియు విద్యారణ్యుల వాక్యార్థమును, అందు వేదాంత దేశికుల తీర్పును ఉన్నదున్నట్లు చెప్పక కొంత మార్పు చేసి చెప్పిరి.

నిజముగ వేదాంత దేశికుల తీర్పు ఇట్లున్నది.

**అసినా తత్వమసినా పరజీవప్రభేదినా ।**
**విద్యారణ్యం మహారణ్యం అక్షోభ్యమునిరచ్ఛినత్ ॥**

దీనిని కావ్యమునందు ఈ విధముగ మార్పుచేసిరి.

**అసినా తత్వమసినా పరజీవప్రభేదినా ।**
**అవైదికోత్తమారణ్యం అక్షోభ్యమునిరచ్ఛినత్ ॥**

ఈ విధముగ విద్యారణ్యం అను పదమునకు బదులుగ అవైదికోత్తమారణ్యం అను పదమునుంచిరి. ఇట్లు మార్పు చేయుటకు కారణమును వ్యాఖ్యానము నందు ఇట్లు చెప్పుదురు.

విద్యారణ్యులను అక్షోభ్య తీర్థులు ఖండించిరి అని చెప్పుట వలన, విద్యకు వీరు విరోధులని చదువరులు పొరబడేరు! కావున విద్యారణ్యులు అని చెప్పక అవైదికోత్తమారణ్యులని చెప్పిరి. అనగ అక్షోభ్యతీర్థులు

ఖండించినది వేదమత విరోధులైన ప్రచ్ఛన్న బౌద్ధులను అను విషయము దీని ద్వారా స్పష్టమగునని కవుల అభిప్రాయము. దీని ద్వారా సకల అవైదికమతమును ఖండించిరని సుందరముగ కవులు తెలియబరచిరి.

ఇతిహాసమును యథాతథముగ మనముందుంచుటకు కవులు చేసిన మరొక ప్రయత్నము - శ్రీ వేదనిధి తీర్థులను వర్ణించు సందర్భమున బాలసూరి సరస్వతులు రచించిన పద్యమునే కావ్యమున ప్రస్థాపించిరి.

**అన్యా సన్యాస వృత్తిస్తే శ్రీమద్వేదనిధే గురో !**
**యతో యుష్మత్పదాసంగాత్ ఉత్తమః పురుషో భవత్ !!** (3-394)

అనునదియే ఆ శ్లోకము. శ్రీవేదనిధులు వ్యాకరణ గ్రంథమైన న్యాసమునకు వృత్తిని రచించిరను అపూర్వ ఐతిహాసిక విషయమును బాలసూరి సరస్వతుల ద్వారానే పలికించిరి. ఇది ఇతిహాస లేఖకులకు ఉండవలసిన ప్రజ్ఞ.

అనంతరము శ్రీ సత్యవ్రత తీర్థుల చరితను తెలిపి ఈ సర్గను ముగించిరి.

నాలుగవ సర్గయందు -

శ్రీ సత్యనిధి తీర్థుల పూర్వాశ్రమపు వివరములను విస్తారముగ తెలియబరచిరి. మహారాష్ట్రపు పుణ్యస్తంభ (పుణెతాంబ) గ్రామమునకు చెందిన మౌనభార్గవ గోత్రీకులైన కౌలిగి వంశమునకు చెందిన శుద్ధ పరంపరకు చేరిన వారు వీరు. ఉద్దండ పండితులైన పురుషోత్తమాచార్యులనెడి బ్రాహ్మణోత్తముల పుత్రులు వీరు. పురుషోత్తమాచార్యుల గురించి వ్రాయవలెననిన కవులకు అమితోత్సాహము. కాని కావ్యపు, ఇతిహాసపు బిగువు ఎచ్చటను సడలదు. వారి పాండిత్యమును గురించిన ఒక పద్యమును గమనింపుము.

**అంగాని వేదాంశ్చ సధర్మశాస్త్రం మీమాంసయా న్యాయయుతం పురాణం !**
**అధీత్య విద్యావశమానినాయచతుర్దశేవాంబుజభూర్దగంతి !!**

శిక్షాది షడంగములు, నాలుగు వేదములు, పురాణములు, ధర్మశాస్త్రపు సమస్త న్యాయములు - వీరి బుద్ధిగనియందు నిండియుండినవి. అంతేగాక అద్వితీయమైన విష్ణుభక్తి వీరిది. గొప్ప కర్మాచరణ పరాయణులు గూడ.

**తస్యాగ్నిహోత్రేష్టి పశు ప్రధానైః పూర్వోత్తరాఖ్యైః ప్రసితస్యయాగైః !**
**త్రేతా సదేష్టా చరణేనతుష్టా రదావభిష్టాని ముహుఃప్రియేవ !!**

**पयोविहारोत्सुकयौवतोल्लसन्मुखश्रिया दर्शितपद्मसम्पदम् ।**
**जगाम कृष्णामतिलङ्घ्य संयमी स तुङ्गभद्राममृतोपमाम्भसम् ।।३६।।**

**पय इति** । संयमी सत्यनिधिः पयोविहारेषु जलक्रीडासु उत्सुकस्य यौवतस्य युवतिसमूहस्य उल्लसन्त्या मुखश्रिया दर्शिता पद्मसम्पत् यस्यास्तां कृष्णां अतिलङ्घ्य अमृतोपमं अम्भो यस्यास्तां तुङ्गभद्रां जगाम ।

ಆ ಕೃಷ್ಣಾನದಿಯಲ್ಲಿ ಯುವತಿಯರ ಸಮೂಹವು ಜಲಕ್ರೀಡೆಯಾಡಲು ಬಹಳ ಉತ್ಸಾಹ ಹೊಂದಿರುತ್ತದೆ. ಅವರು ಜಲಕ್ರೀಡೆಗೆ ಇಳಿದಾಗ ಮುಖ–ವನ್ನು ಮೇಲೆತ್ತಿ ಕ್ರೀಡಿಸುತ್ತಾರೆ. ಇದರಿಂದಾಗಿ ನದಿಯು ಕಮಲ ಪುಷ್ಪಗಳಿಂದ ಪೂರ್ಣವಾದಂತೆ ತೋರುವುದು. ಇಂಥ ಕೃಷ್ಣೆಯನ್ನು ದಾಟಿ, ತುಂಗಭದ್ರಾ ನದಿಗೆ ಶ್ರೀಗಳವರು ಬಂದರು. ತುಂಗಾನದಿಯ ನೀರು ಅಮೃತಕ್ಕೆ ಸಮಾನ.

**निषेव्य तां तीरमहीरुहावलीलतावितानान्तरितार्करोचिषम् ।**
**प्रतिष्ठमानोऽथ ययौ स वेङ्कटं सुवर्णशृङ्गप्रकरैर्विशङ्कटम् ।।३७।।**

**निषेव्येति** । तीरमहीरुहाणां तटस्थितवृक्षाणां आवलीनां पङ्क्तीनां लतानां वितानैः विस्तारैः अन्तरितान्यर्करोचींषि यस्यां । तां तुङ्गभद्रां निषेव्य प्रतिष्ठमानो गच्छन् स सत्यनिधिः, सुवर्णश्रृङ्गाणां प्रकरैः समूहैः। विशङ्कटं बृहन्तं "विशङ्कटं पृथुबृहदि"त्यमरः। वेङ्कटेशं वेङ्कटाचलं ययौ।

ಆ ತುಂಗಭದ್ರಾ ನದಿಯು ಎರಡೂ ತೀರಗಳಲ್ಲಿ ವೃಕ್ಷಗಳ ಸಾಲುಗಳನ್ನು ಹೊಂದಿದೆ. ಆ ವೃಕ್ಷಗಳು ಬಹಳ ನಿಬಿಡವಾಗಿವೆ. ಇದರಿಂದಾಗಿ ಸೂರ್ಯನ ಕಿರಣಗಳು ನೆಲವನ್ನು ಮುಟ್ಟಲು ಅಸಮರ್ಥವಾಗುತ್ತವೆ. ಇಂತಹ ತುಂಗ–ಭದ್ರೆಯಲ್ಲಿ ಸ್ನಾನಾದಿಗಳನ್ನು ಪೂರ್ಣಗೊಳಿಸಿ, ಮುಂದೆ ಬಂಗಾರಶೃಂಗಗಳಿಂದ ವಿಸ್ತಾರವಾದ ಶ್ರೀವೆಂಕಟಾಚಲಕ್ಕೆ ಶ್ರೀಸತ್ಯನಿಧಿಗಳು ಹೊರಟರು.

**प्रसन्नमन्दस्मितपुष्पसंहतिप्रसूतलोकेष्टफलोद्गमश्रिया ।**
**अजस्रराजत्तनुकल्पभूरुहश्चकास्ति यस्मिन् निधिरर्थिनां हरिः ।।३८।।**

तं द्वाभ्यां वर्णयति । **प्रसन्नेति** । यस्मिन् वेङ्कटाचले प्रसन्नं मन्दस्मितमेव पुष्पाणां संहतिः तस्यां प्रसूतं लोकानां इष्टमेव फलोद्गमः तस्य श्रिया, अजस्रं राजत् तनुरेव कल्पभूरुहो यस्य स तथोक्तः । अर्थिनां निधिः हरिः चकास्ति ।

ಶ್ರೀಸತ್ಯನಿಧಿಗಳು ವೆಂಕಟೇಶನೆಡೆಗೆ ನಡೆದರು. ವೇಂಕಟೇಶನು ಭಕ್ತರಿಗೆ ಕಲ್ಪವೃಕ್ಷವೇ ಸರಿ, ಈ ಭಗವಂತನ ಮಂದಹಾಸವೇ ಪುಷ್ಪಗಳ ಸಮೂಹ. ಜನರ ಅಭೀಷ್ಟಗಳೇ ಫಲಗಳ ಉದ್ಗಮ. ಇಂತಹ ಫಲೋದ್ಗಮಕಾಂತಿಯಿಂದ ಶೋಭಿಸುತ್ತಿರುವ ವೇಂಕಟೇಶನ ದೇಹವೇ ಕಲ್ಪವೃಕ್ಷ. ಈ ಕಲ್ಪವೃಕ್ಷನಾದ ಹರಿಯು, ಶರಣು ಬಂದ ಅರ್ಥಿಗಳಿಗೆ ನಿಧಿಯಂತೆ ಶೋಭಿಸುತ್ತಿದ್ದಾನೆ.

**न देवतासन्निधिवर्जिता शिला-**
**प्यतीर्थभूतो न जलाशयो वा ।**
**न यत्र यात्रा च निरर्थिकार्थिनां**
**न कोऽपि लोकेष्वकरार्पणोद्यतः ।।३९।।**

**नेति** । यत्र वेङ्कटे देवतासंनिधिवर्जिता शिला नास्ति । अतीर्थभूत-जलाशयोऽपि वा यत्र नास्ति, अर्थिनां यात्रा च निरर्थिका न, लोकेषु अकरार्पणोद्यतः कोऽपि जनो नास्ति । सर्वा शिला देवतासंनिहिता । सर्वोऽपि जलाशयः तीर्थभूतः, अर्थिनां यात्रा सार्थिका, लोकेषु सर्वोऽपि करार्पणोद्यत एवेति भावः ।

ಆ ವೇಂಕಟಾಚಲದಲ್ಲಿ ದೇವತಾಸನ್ನಿಧಾನವಿಲ್ಲದ ಶಿಲೆಯಿಲ್ಲ. ತೀರ್ಥ–ವಾಗದ ಜಲಾಶಯವಿಲ್ಲ. ಎಲ್ಲ ಭಕ್ತರ ಯಾತ್ರೆಯೂ ಸಫಲವೇ ಆಗುತ್ತದೆ. ಆ ಭಗವಂತನನ್ನು ನಮಿಸದವರಿಲ್ಲ. ಅಥವಾ ತನ್ನ ಕರವ(ತೆರಿಗೆಯ)ನ್ನು ಅರ್ಪಿಸದವರಿಲ್ಲ.

**नमत्सरोजासनमुख्यदेवताकिरीटमाणिक्यनवार्कविभ्रमैः ।**
**प्रफुल्लरक्ताब्जनिभाङ्घ्रिपल्लवं स भिक्षुराट् तत्र ददर्श पूरुषम्।।४०।।**

**नमदिति** । तत्र स भिक्षुराट्, नमन्त्यः सरोजासनमुख्याः ब्रह्ममुख्याः याः देवताः तासां किरीटेषु माणिक्यान्येव नवार्काः तेषां विभ्रमैः । प्रफुल्लेन रक्ताब्जेन निभं सदृशं अङ्घ्रिपल्लवं यस्य तं पुरुषं वेङ्कटप्रभुं ददर्श।

ಶ್ರೀವೇಂಕಟೇಶನಿಗೆ ಬ್ರಹ್ಮಾದಿ ದೇವತೆಗಳೆಲ್ಲ ಬಂದು ನಮಿಸುತ್ತಾರೆ. ನಮಿಸುವ ದೇವತೆಗಳ ಕಿರೀಟದಲ್ಲಿರುವ ಮಾಣಿಕ್ಯಗಳು ಹೊಸಸೂರ್ಯನಂತೆ ಪ್ರಕಾಶಮಾನವಾಗಿರುತ್ತವೆ. ಅವುಗಳ ವಿಭ್ರಮದಿಂದ ವಿಕಾಸ ಹೊಂದಿದಂತೆ ಇವೆ ಕೆಂದಾವರೆಗೆ ಹೋಲುವ ಭಗವಂತನ ಪಾದಪಲ್ಲವಗಳು. ಅಂತಹ ವೇಂಕಟೇಶನನ್ನು ಶ್ರೀಸತ್ಯನಿಧಿಗಳು ಕಂಡರು.

**जगच्छिरोरत्नमपास्य भास्वरं परं पदं स्वं पुरुषोत्तमः श्रिया ।**
**यदीयतीरे विहरत्यनारतं चिरं स तत्स्वामिसरोऽध्यशेत ।।४१।।**

**जगदिति** । पुरुषोत्तमः श्रिया सह जगतां शिरोरत्नं सर्वलोकोपरिस्थितं इत्यर्थः । भास्वरं स्वप्रकाशं अत एव परं श्रेष्ठं स्वं पदं स्थानं वैकुण्ठमित्यर्थः । अपास्य विहाय यदीये यत्स्वामिसरःसम्बन्धिनि तीरे अनारतं विहरति । वैकुण्ठादतिप्रियमित्यर्थः । तत् स्वामिसरः, सत्यनिधिः चिरं अध्यशेत अधिष्ठितवान् । अधिशीङ्स्थासां(१.४.४६) इति आधारस्य कर्मत्वम् ।

ಪುರುಷೋತ್ತಮನಾದ ಶ್ರೀಹರಿಯು, ಸರ್ವಲೋಕಗಳಲ್ಲಿ ಶ್ರೇಷ್ಠವಾದ ವೈಕುಂಠವನ್ನು ತೊರೆದು, ರಮಾಸಹಿತನಾಗಿ, ಯಾವ ಸರೋವರದ ತೀರದಲ್ಲಿ ವಿಹರಿಸುತ್ತಿಹನೋ, ಅಂತಹ ಸ್ವಾಮಿಪುಷ್ಕರಣೀ ತೀರದಲ್ಲಿ ಶ್ರೀಸತ್ಯನಿಧಿಗಳು ಬಹಳ ದಿವಸ ವಾಸಮಾಡಿದರು.

**स सन्ततापात्यजनावनक्रिया-**
**विनिद्रमुद्योतितवैभवोज्वलम् ।**
**श्रियो निवासं निकषा स मौनिराट्**
**ददौ द्विजेभ्योऽकृतरोधनं धनम् ।।४२।।**

**स इति** । स मौनिराट् सन्ततं आपात्यानां आपततां जनानां अवनक्रियायां विनिद्रं जागरूकम् । उद्योतितैर्वैभवैः उज्वलं श्रियो निवासं वेङ्कटेशं निकषा तस्य समीप इत्यर्थः । अभितः परितः(१.४.४२) इत्यादिना द्वितीया । द्विजेभ्यो धनं अकृतरोधनं निर्निरोधनं ददौ ।

ಶ್ರೀಸತ್ಯನಿಧಿತೀರ್ಥರು, ನಿರಂತರ ಬರುವ ಜನರ ರಕ್ಷಣೆಯಲ್ಲಿ ನಿದ್ದೆ ಇಲ್ಲದ ಶ್ರೀನಿವಾಸನ ಸನ್ನಿಧಿಯಲ್ಲಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಟ್ಟರು.

**स खण्डयन् पण्डितमण्डलाग्रणीः**
**प्रचण्डपाषण्डिजनान् पृथग्विधान् ।**
**स्फुरत्प्रभामण्डलमण्डिताम्बरो**
**रराज मार्ताण्ड इवान्धसञ्चयान् ।।४३।।**

**स इति** । पृथग्विधान् प्रचण्डपाषण्डिजनान् खण्डयन् पण्डितमण्ड-

ग्रणीः स सत्यनिधिः, अन्धानां अन्धकाराणां सञ्चयान् सङ्घान् "अन्धं तमस्यपी"त्यमरः । खण्डयन् । स्पुरता प्रभारूपेण मण्डलेन बिम्बेन । "बिम्बोऽस्त्री मण्डलं त्रिष्वि"त्यमरः । मण्डितं अलङ्कृतं अम्बरं आकाशो येन स मार्ताण्ड इव रराज ।

ಅನೇಕ ವಿಧವಾದ ಪಾಷಂಡಪಂಡಿತರನ್ನು ಖಂಡನೆ ಮಾಡುವ, ಪಂಡಿತಮಂಡಲದಲ್ಲಿ ಅತ್ಯಂತ ಶ್ರೇಷ್ಠರಾದ ಶ್ರೀಸತ್ಯನಿಧಿಗಳು ಅಂಧಕಾರ ಸಮೂಹವನ್ನು ಖಂಡಿಸಿ ತನ್ನ ಪ್ರಕಾಶಮಂಡಲದಿಂದ ಆಕಾಶವನ್ನು ಅಲಂಕರಿಸಿದ ಸೂರ್ಯನಂತೆ ಶೋಭಿಸಿದರು.

**ततः परिव्राजकशेखरो जनैः जगाम काञ्चीं नगरीं गरीयसीम् ।**
**करीन्द्रभूभृच्छिखरस्थलीमिलद्विनीलपाथोदनिभाजिताञ्चिताम् ।।४४।।**

**तत इति** । ततः परिव्राजकशेखरः, सत्यनिधिः नगरीषु गरीयसीं करीन्द्रभूभृतो हस्तिगिरेः शिखरस्थल्यां मिलतो विनीलपाथोदस्य निभेन सदृशेन अजितेन विष्णुना अंचितां पूजितां काञ्चीं जनैः सह जगाम ।

ಅನಂತರ ಯತಿಶ್ರೇಷ್ಠರಾದ ಶ್ರೀಸತ್ಯನಿಧಿಗಳು ನಗರಗಳಲ್ಲಿ ಶ್ರೇಷ್ಠವಾದ ಹಸ್ತಿಗಿರಿಯ ಶಿಖರದಲ್ಲಿ ಸಂಗತವಾದ ನೀಲಮೇಘದಂತಿರುವ ವಿಷ್ಣುವಿನಿಂದ ಪೂಜಿತವಾದ ಕಾಂಚೀಪುರಕ್ಕೆ ಜನರಿಂದ ಸಹಿತರಾಗಿ ಹೊರಟರು.

**सहस्रपत्रप्रभवस्य यज्विनो**
**रुचा ज्वलन्नुत्तरवेदिमध्यतः ।**
**मुदाऽऽविरासीत् किल यत्र वल्लभः**
**श्रियो वपासौरभवासिताधरः ।।४५।।**

तां द्वाभ्यां वर्णयति । **सहस्रेति** । यत्र काञ्च्यां वपायाः हृन्मेधसः । "हृन्मेधस्तु वपा वसे"त्यमरः । सौरभेण वासितोऽधरो यस्य सः, श्रियो-वल्लभः, यज्विनः सहस्रपत्रप्रभवस्य धातुः उत्तरवेदिमध्यतः रुचा ज्वलन् मुदाविरासीत् किलेति प्रसिद्धिः ।

ಆ ಕಂಚೀಪುರದಲ್ಲಿ ರಮೆಯ ಹೃದಯ ಮೇದಸ್ಸಿನಿಂದ ಪರಿಮಳಿತವಾದ ಕೆಳದುಟಿಯವನಾದ ರಮಾಪತಿ ವರದರಾಜನು, ಯಾಗ ಮಾಡುವ ಬ್ರಹ್ಮದೇವರ ಉತ್ತರವೇದಿಯ ಮಧ್ಯದಿಂದ, ಕಾಂತಿಯಿಂದ ಉಜ್ವಲನಾಗಿ ಸಂತೋಷದಿಂದ ಆವಿರ್ಭವಿಸಿದನು.

**जनैः सरिद्रूपधरा विभाव्यते सरस्वती यत्र निगूढनिर्झरा ।
महाप्रवाहामधिगत्य लज्जया सरस्वतीं सत्यनिधेरिवोद्गताम् ।।४६।।**

**जनैरिति** । यत्र काञ्च्यां सरिद्रूपधरा सरस्वती सत्यनिधेः सकाशात् उद्गतां महाप्रवाहां सरस्वतीं अधिगत्य लज्जयेव निगूढनिर्झरा जनैः विभाव्यते विज्ञायते।

ಶ್ರೀಸತ್ಯನಿಧಿಗಳ ವಾಕ್‌ಪ್ರವಾಹವನ್ನು ನೋಡಿ ನಾಚಿಕೆಯಿಂದ ಸರಸ್ವತೀ ನದಿ ಮರೆಮಾಚಿದೆ ಎಂದು ಆ ಕಂಚಿಯಲ್ಲಿಯ ಜನರು ತಿಳಿದರು.

**गिरीशमेकाम्रतलाधिवासिनं गिरिप्रसूतां च बिलेशयां सतीम् ।
अशेषतीर्थानि च मानयन् यतिर्ववर्ष वित्तं वरदं प्रहर्षयन्।।४७।।**

**गिरीशमिति** । एकाम्रस्य चूतवृक्षस्य तले अधिवासिनं गिरीशं बिलेशयां गिरिप्रसूतां सतीं उमां अशेषतीर्थानि च मानयन् बहुमानयन् यतिः सत्यनिधिः वरदं श्रीवासुदेवं प्रहर्षयन् वित्तं ववर्ष ।

ಶ್ರೀಸತ್ಯನಿಧಿಗಳು ಮಾವಿನ ಮರದಡಿಯಲ್ಲಿರುವ ರುದ್ರದೇವರನ್ನು, ಬಿಲದಲ್ಲಿರುವ ಉಮಾದೇವಿಯನ್ನು, ಎಲ್ಲ ತೀರ್ಥಗಳನ್ನು ಹಾಗೂ ತದಭಿ- ಮಾನಿ ದೇವತೆಗಳನ್ನು ಪೂಜಿಸಿ ವರದರಾಜನನ್ನು ಸಂತೋಷಪಡಿಸಿದರು. ಅಲ್ಲಿ ಪಂಡಿತರಿಗೆ ಧನದ ವೃಷ್ಟಿಯನ್ನು ಮಾಡಿದರು.

**पुरीञ्च काञ्चीं परमेष्ठिनाञ्चितां
अधिष्ठितं सत्यनिधिं निधिं सताम् ।
निशम्य चञ्जीनगराधिभूरभूत्
अनन्तनामा प्रभुरुन्मना भृशम् ।।४८।।**

**पुरीमिति** । चञ्जीनगरस्य अधिभूः नायकः । "अधिभूर्नायको नेते"त्यमरः । अनन्तनामा प्रभुः परमेष्ठिना ब्रह्मणा अञ्चितां पूजितां, केन ब्रह्मणा अञ्चते इति काञ्ची । तां पुरीं अधिष्ठितं सतां निधिं अक्षय-द्रव्यस्थानं सत्यनिधिं निशम्य भृशं उन्मना उत्सुकोऽभवत् ।

ಚಂಜೀನಗರದ ರಾಜನಾದ ಅನಂತಪ್ರಭುವು ಬ್ರಹ್ಮನಿಂದ ಮಾನ್ಯವಾದ ಕಂಚೀನಗರದಲ್ಲಿ ಇರುವ ಸಜ್ಜನರಿಗೆ ಆಶ್ರಯರಾದ ಶ್ರೀಸತ್ಯನಿಧಿಗಳನ್ನು ಕಂಡು ಉತ್ಸಾಹಭರಿತನಾದನು.

**श्रीवैभवेन विदितेन गुरुप्रसाद-**
**भूमातिवेलपरिवर्धितकन्दलेन ।**
**आराद्धुमाहतमना गुरुसार्वभौमं**
**श्रीमान्महानभिययौ तमनन्तनामा ।।४९।।**

**श्रीवैभवेनेति** । अनन्तनामा महान् श्रीमान् प्रभुः गुरोः प्रसादस्य भूम्ना बाहुल्येन अतिवेलं भृशं परिवर्धिताः कन्दलाः धनकनका वाहनसमृद्धयो यस्य तेन । श्रियो वैभवेन आराद्धुं आराधनं कर्तुं, आहतं मनो यस्य स तथोक्तः सन्, गुरुसार्वभौमं सत्यनिधिं अभिययौ ।

ಆ ಅನಂತಪ್ರಭುವು, ಗುರುಗಳ ಪ್ರಸಾದಾತಿಶಯದಿಂದ ತನಗೆ ಅತ್ಯಂತ ಧನಕನಕವಾಹನಾದಿಸಮೃದ್ಧಿ ಉಂಟಾದ್ದರಿಂದ ತನ್ನ ಸಂಪತ್ತಿನ ವೈಭವಗಳಿಂದ ಗುರುಗಳನ್ನು ಸೇವಿಸಲು ಶ್ರೀಸತ್ಯನಿಧಿಗಳ ಬಳಿಗೆ ಹೊರಟನು.

**स्वभ्रातृभिर्भुवनविश्रुतशौर्यधैर्य-**
**विद्यानुविद्धमहनीयगुणैरुदारैः ।**
**आच्छादितक्षितितलैश्च स सैन्यसङ्घै-**
**र्गच्छन् निवेशमकरोदथ बाहुदायाम् ।।५०।।**

**स्वभ्रातृभिरिति** । सोऽनन्तनामा प्रभुः, भुवने विश्रुताभिः शौर्यधैर्यविद्याभिः अनुविद्धाः महनीयाः पूज्याः गुणाः येषां तैः अत एवोदारैः स्वभ्रातृभिः आच्छादितं क्षितितलं यैस्ते सैन्यसङ्घैश्च सह गच्छन् सन् बाहुदायां नद्यां तत्तीर इत्यर्थः । निवेशं शिबिरं "निवेशं शिबिरं षण्डे"त्यमरः । अकरोत् ।

ಆ ಅನಂತಪ್ರಭುವು ಶೌರ್ಯ, ಧೈರ್ಯ ಹಾಗೂ ವಿದ್ಯಾದಿಗಳಿಂದ ಕೂಡಿದ ಮಹನೀಯ ಗುಣವಂತರೂ ಆದ ತಮ್ಮ ತಮ್ಮಂದಿರಿಂದ, ವಿಶಾಲವಾದ ಸೈನ್ಯದಿಂದಲೂ ಸಹಿತನಾಗಿ ಗುರುಗಳನ್ನು ಬರಮಾಡಿಕೊಳ್ಳಲು ಬಾಹುದಾನದಿಯ ತೀರದಲ್ಲಿ ಬಿಡಾರವನ್ನು ಹಾಕಿದನು.

**नागैः कपोलकषणाधुतकाननागैः**
**वाहैश्च वेगभरनिर्जितगन्धवाहैः ।**
**चक्रैः प्रतापपरिभूतविपक्षचक्रैः**
**पत्रैरभात्स सचिवैश्च विभुर्विपत्रैः ।।५१।।**

**नागैरिति** । स अनन्तनामा विभुः कपोलकषणेन गण्डसङ्घर्षणेनाधुताः कम्पिताः काननानां वनानां अगाः वृक्षाः यैः तैः नागैः गजैः, वेगभरेण निर्जितो गन्धवाहो वायुः यैस्तैर्वाहैस्तुरगैश्च, प्रतापेन परिभूतं विपक्षचक्रं शत्रुराष्ट्रं यैस्तैश्चक्रैः सैन्यैः । "वरूथिनी बलं सैन्यं चक्रं चानीकमस्त्रियाम्"इत्यमरः । पत्रैः शिबिकादिरूपवाहनैः । "पत्रं वाहनपक्षयोः"इत्यमरः । विपदः त्रायन्त इति विपत्रास्तैः सचिवैर्मन्त्रिभिश्चाभात् ।

ಕಪೋಲಗಳ ಘರ್ಷಣೆಯಿಂದ ಹೆಮ್ಮರಗಳನ್ನು ಅಲುಗಾಡಿಸುವ ಆನೆ–ಗಳಿಂದ, ವೇಗದಲ್ಲಿ ವಾಯುವನ್ನು ಸೋಲಿಸುವ ಕುದುರೆಗಳಿಂದಲೂ, ಪ್ರತಾಪದಿಂದ ಪರಸೈನ್ಯವನ್ನು ಸೋಲಿಸುವ ಸೈನ್ಯಗಳಿಂದಲೂ, ಶಿಬಿಕಾ ಮುಂತಾದ ವಾಹನಗಳಿಂದಲೂ, ವಿಪತ್ತುಗಳಿಂದ ರಕ್ಷಿಸುವಲ್ಲಿ ಚತುರರಾದ ಮಂತ್ರಿಗಳಿಂದಲೂ, ಸಹಿತನಾಗಿ ಅನಂತಪ್ರಭುವು ಶೋಭಿಸಿದನು.

**प्रस्थानभीतरिपुराजकुलोपनीत-**
**भूषामतङ्गजतुरङ्गमुखोपदाभिः ।**
**आस्थानचत्वरमुदित्वरसौविदल्ल-**
**कोलाहलाकुलमनन्तविभोर्ललास ।।५२।।**

**प्रस्थानेति** । उदित्वरैः उद्गतैः सौविदल्लानां कञ्चुकीनाम् । "सौविदल्लाकञ्चुकी च"इत्यमरः । कोलाहलैः कलकलैः व्याकुलं अनन्तविभोः आस्थानस्य चत्वरं अङ्गणं "देहिल्यङ्गणं चत्वराजिरमि"त्यमरः । प्रस्थानाद्भीतेन रिपुराजानां कुलेन उपनीताभिः भूषामतंगजतुरङ्गमुखाभिः उपहारैः ललास लसति स्म ।

ಕಂಚುಕಿಯರ ಕೋಲಾಹಲದಿಂದ ವ್ಯಾಕುಲವಾದ ಅನಂತನ ಅಂತಃಪು–ರದ ಅಂಗಣವು, ಪ್ರಸ್ಥಾನದಿಂದ ಭಯಗೊಂಡ ಪರಕೀಯ ರಾಜರ ಸೈನ್ಯ ತಂದ ಆಭರಣಗಳು, ಆನೆಗಳು, ಕುದುರೆಗಳು, ಮುಂತಾದ ಕಾಣಿಕೆಗಳಿಂದ ಶೋಭಿಸಿತು.

**दूतोपनीतगुरुसत्यनिधिक्षमीन्द्र-**
**वार्तासुधाकलनवर्धितसम्मदश्रीः ।**
**नीत्वा निशामुपगुरु प्रययावधीशः**
**प्रस्थानदुन्दुभिरवैर्बधिरीकृताशः ।।५३।।**

**दूतेति** । दूतैः उपनीता सुप्रापिता गुरोः सत्यनिधिक्षमीन्द्रस्य वार्ता वृत्तान्त एव सुधा तस्य आकलनेन श्रवणेन वर्धितसम्मदश्रीः प्रमोदसम्पत् स अधीशोऽनन्तनामा विभुः, निशां नीत्वा प्रस्थानदुन्दुभिमुरवैः प्रयाणभेरीशब्दैः बधिरीकृताः आशाः यस्य स तथोक्तः सन् उपगुरु गुरोः समीपं अव्ययीभावसमासः । प्रययौ ।

ಅನಂತಪ್ರಭುವಿನ ದೂತರು, ಗುರುಗಳು ಸಮೀಪಿಸುವ ವಚನಾಮೃತ–ವನ್ನು ಸುರಿಸಿದರು. ಅದರ ಶ್ರವಣದಿಂದ ಆನಂದ ಅಭಿವೃದ್ಧಿಯಾಯಿತು. ರಾತ್ರಿಯನ್ನು ಕಳೆದು, ಪ್ರಾತಃ ಕಾಲದಲ್ಲಿ, ಹೊರಡುವ ಸೂಚನೆಯನ್ನು ಕೊಡುವ ನಗಾರಿಗಳು ಮೊಳಗಿದವು. ತನ್ನ ಶಬ್ದಗಳಿಂದ ದಿಕ್ಕುಗಳನ್ನು ಕಿವುಡುಮಾಡುವ ನಗಾರಿಗಳಿಂದ ಯುತನಾದ ಅನಂತಪ್ರಭುವು ಗುರುಗಳನ್ನು ಸಮೀಪಿಸಿದನು.

**तस्य प्रभोर्गजकटस्रुतदानधारा-**
**जंबालिते पथि हयैश्च तदा न धाराः ।**
**सैन्यैश्च नो जगृहिरे बहुधा वनानि**
**हन्तुं मृगानधिगतैर्बहुधावनानि ।।५४।।**

**तस्येति** । तदा गमनसमये तस्य अनन्तनाम्नः प्रभोः हयैश्च गजकटेभ्यः स्रुताभिः दानस्य मदस्य धाराभिः जंबालिते पङ्किले पथि मार्गे धाराः गतिविशेषाः । आस्कन्दितं धौरितकं रेजितं वल्गितं प्लुतम् । "गतयोमूः पंचधारा"इत्यमरः । न जगृहिरे न गृहीताः । कर्मणि लिट् । बहुधा मृगान् हन्तुं वनानि अधिगतैः सैन्यैश्च पथि बहुधावनानि शीघ्रगमनानि न जगृहिरे न गृहीतानि ।

ಈ ರೀತಿ ಸಸೈನ್ಯದಿಂದ ಹೊರಟಾಗ ಆನೆಗಳ ಮದಜಲದಿಂದ ಮಾರ್ಗ–ವೆಲ್ಲ ಕೆಸರಾಯಿತು. ಇಂತಹ ಮಾರ್ಗದಲ್ಲಿ ಕುದುರೆಗಳಿಗೂ ಮೃಗಗಳನ್ನು ಕೊಲ್ಲಲು ಅನೇಕ ಸಲ ವನವನ್ನು ಕುರಿತು ಹೋಗುವ ಸೈನಿಕರಿಗೂ ವೇಗ–ವಾಗಿ ಹೋಗಲು ಸಾಧ್ಯವಾಗಲಿಲ್ಲ.

**कोऽयं महानुपचितो वपुषा पुरस्तात्**
**पश्चात् सपुच्छ इति वर्त्मनि पृच्छमानैः।**
**प्रत्युद्गतः सकुतुकैरुपदाशिरस्कैः**
**सम्म्राडभूत् स बहुजानपदैः सयूथैः ।।५५।।**

**कोऽयमिति** । सोऽनन्तनामा सम्राट् पुरस्तात् पश्चात् पुच्छाभ्यां सहितः सपुच्छः वपुषा शरीरेण उपचितोऽभिवृद्धः अयं कः इति पृच्छमानैः जनैरिति शेषः । उपदोपहारः शिरसि येषां तैः तथाभूतैः । सयूथैः सपरिवारैः सकौतुकैः कौतुकेन सहितैः सविस्मयैरित्यर्थः । बहुभिर्जानपदैः राष्ट्रजनैर्वर्त्मनि मार्गे प्रत्युद्गतोऽभूत् ।

ಅನಂತವಿಭುವು ಮಾರ್ಗದಲ್ಲಿ ಹೋಗುತ್ತಿರಲು, ಆಶ್ಚರ್ಯದಿಂದ ತಮ್ಮ ರಾಷ್ಟ್ರದ ಅನೇಕ ಜನರಿಂದ ಮತ್ತು ತಮ್ಮ ಪರಿವಾರದಿಂದ ಸಹಿತರಾಗಿ ಮಾರ್ಗದಲ್ಲಿರುವ ಅನೇಕ ಸಾಮಂತರು ತಲೆಯ ಮೇಲೆ ಕಾಣಿಕೆಗಳನ್ನು ಹೊತ್ತು ತಂದು ಅರ್ಪಿಸುತ್ತಿದ್ದರು. ಇದನ್ನು ನೋಡುವ ಜನರು ದೇಹದಿಂದ ಉನ್ನತವಾದ ಎರಡೂ ಕಡೆ ಬಾಲವುಳ್ಳ ಒಂದು ವಿಚಿತ್ರ ಪ್ರಾಣಿ ಯಾವುದೆಂದು ಕೇಳುತ್ತಿದ್ದರು.

**मार्गं विलङ्घ्य निजवैभवनिर्जितेन्द्रो**
**दूरे निवेश्य पृतनां महतीममात्यैः ।**
**स भ्रातृभिश्च महितैः सहितः प्रसन्नं**
**प्रापद्गुरुं प्रणयभारविनम्रगात्रः ।।५६।।**

**मार्गमिति** । निजेन वैभवेन निर्जित इन्द्रो येन सोऽनन्तप्रभुः मार्गं विलङ्घ्य महतीं पृतनां दूरे निवेश्य प्रणयभारेण भक्त्यतिशयेन विनम्रं गात्रं यस्य स तथोक्तः सन् महितैरमात्यैः भ्रातृभिश्च सहितः सन् प्रसन्नं गुरुं सत्यनिधिं प्रापत् । प्रपूर्वादापेर्लुङि लिदित्वादङ् ।

ವೈಭವದಲ್ಲಿ ಇಂದ್ರನನ್ನು ಗೆದ್ದ ಅನಂತವಿಭುವು, ಮಾರ್ಗವನ್ನು ದಾಟಿ ತನ್ನ ಸೈನ್ಯವನ್ನು ದೂರ ನಿಲ್ಲಿಸಿ, ಭಕ್ತಿಯಿಂದ ಬಾಗಿ, ತನ್ನ ಸಚಿವರಿಂದಲೂ ಪರಿವಾರದಿಂದಲೂ ಸಹಿತನಾಗಿ ಪ್ರಸನ್ನರಾದ ಶ್ರೀಸತ್ಯನಿಧಿಗಳನ್ನು ಸಮೀಪಿಸಿದನು.

**तं वन्दमानमथ सत्यनिधिक्षमीन्द्रः**
**पादाम्बुजार्पितमणिप्रकरप्रसूनम् ।**
**शिष्यावलोकनसमृद्धमना जगाद**
**वत्साधिराज्यमचिराद्भवतात्तवेति ।।५७।।**

**तमिति** । अथ सत्यनिधिक्षमीन्द्रः पादाम्बुजयोरर्पिताः मणिप्रकरा एव प्रसूनानि येन तं तथोक्तम् । वन्दमानं अनन्तविभुम् । शिष्यावलो-

कनेन समृद्धं मनो यस्य स तथोक्तः सन्, हे वत्स! अचिरात्तव अधि-राज्यं  साम्राज्यं भवतात् भूयात् । अशिषि लोट् ।"तुह्योः"(७.१.३५) रिति तातङ् । इति जगाद ।

ತಮ್ಮ ಪಾದಕಮಲಗಳಲ್ಲಿ ಒಳ್ಳೆ ಮಣಿಪ್ರಸೂನಗಳನ್ನು ಸಮರ್ಪಿಸಿದ ನಮಸ್ಕರಿಸುವ ಶಿಷ್ಯನಾದ, ಅನಂತವಿಭುವನ್ನು ಕಂಡು, ಹರ್ಷಿತರಾದ ಶ್ರೀಸತ್ಯನಿಧಿತೀರ್ಥರು "ಹೇ ವತ್ಸ! ಬೇಗನೇ ಮಹಾಸಾಮ್ರಾಜ್ಯ ಹೊಂದುವಿ" ಎಂದು ಆಶೀರ್ವಾದವನ್ನು ಮಾಡಿದರು.

**संप्रार्थितो मुनिवरो महनीयसम्पत्-**
**सारस्वतप्रभृतिभूरिगुणैकधाम्ना ।**
**शिष्येण शीतलकृपालहरीभिरेनं**
**सिञ्चन् ययावथ स चञ्जिपुरं प्रहर्षात् ।।५८।।**

**संप्रार्थित इति** । अथ महनीयाः सम्पदः सारस्वतं विद्या च तत् प्रभृतीनां भूरिणां बहूनां गुणानां एकधाम्ना मुख्याश्रयेण शिष्येण अनन्त-प्रभुणा संप्रार्थितो मुनिवरः सत्यनिधिः, शीतलाभिः कृपायाः लहरीभिः प्रवाहैरेनमनन्तप्रभुं सिञ्चन् प्रहर्षात् चञ्जिपुरं ययौ ।

ಮಹತ್ತಮವಾದ ವಿದ್ಯಾ, ಸಂಪತ್ತು ಮುಂತಾದ ಗುಣಗಳಿಗೆ ಮುಖ್ಯ ಆಶ್ರಯನೆನಿಸಿದ ಶಿಷ್ಯನಾದ ಅನಂತಪ್ರಭುವನ್ನು  ಕೃಪಾಲಹರಿಯಿಂದ ಹರಿಸುತ್ತಾ ಅವನ ಪ್ರಾರ್ಥನೆಯಂತೆ ಚಂಜೀಪುರಕ್ಕೆ ಹೊರಟರು.

**उच्चैःश्रवःप्रतिभटामितघोटकेन**
**शक्रेभजित्वरपरःशतवारणेन ।**
**विश्वंभरामघवतैवमनन्तनाम्ना**
**रेजेऽन्वितः स पथि सत्यनिधिर्गुरुश्रीः ।।५९।।**

**उच्चैरिति** । गुर्वी श्रीर्यस्य स इति । गुरोर्बृहस्पतेः श्रीरिव श्रीर्यस्येति च सत्यनिधिः उच्चैःश्रवसः प्रतिभटाः सदृशा इत्यर्थः । अमिताः घोटकाः वाजिनः यस्य स तथोक्तः । तेन । "घोटके पीतितुरगे"त्यमरः । शक्रे-भस्य ऐरावतस्य जित्वराः जेतारः । "जेता जिष्णुश्च जित्वर"इत्यमरः । परः शताः शतात्परे वारणाः गजाः यस्य तेन तथोक्तेन । विश्वंभरायाः भूमेः मघवतेन्द्रेण अनन्तनाम्ना एवं अन्वितः सन् पथि रेजे ।

ಅನಂತಪ್ರಭುವು ಉಚ್ಚೈಃ ಶ್ರವಸ್ಸಿಗೆ ಸದೃಶವಾದ ಅನೇಕ ಕುದುರೆಗಳಿಂದ, ಐರಾವತದಂಥ ನೂರಾರು ಆನೆಗಳಿಂದ, ಇಂದ್ರನು ಬೃಹಸ್ಪತ್ಯಾಚಾರ್ಯರನ್ನು ಪೂಜಿಸುವಂತೆ ಶ್ರೀಸತ್ಯನಿಧಿತೀರ್ಥರನ್ನು ಪೂಜಿಸಿದನು.

**मध्येपथं विबुधसेनमुदीयमान-**
**मालोकनाय गुरुसत्यनिधिक्षमीन्दोः ।**
**नानादिगन्तरनृपोपहृतोपदाभि-**
**रानन्दयद्भृशमनन्तविभुर्महेच्छः ।।६०।।**

**मध्येपथमिति** । महेच्छो महाशयः । "महेछस्तु महाशय"इत्यमरः अनन्तविभुः गुरोः सत्यनिधिक्षमीन्दोः आलोकनाय मध्येपथं मार्गमध्ये उदीयमानं आगतं विबुधानां पण्डितानां सेनं । सम्बंबुविधिनंधसेनं विभाषासेनासुरेति नपुंसकत्वम् । नानादिगन्तरनृपैः उपाहृताभिः उपायनैः भृशमानन्दयत् । सर्वाण्युपायनानि ब्राह्मणभ्यो दत्तवानिति भावः ।

ಮಹಾಶಯನಾದ ಅನಂತವಿಭುವು, ಗುರುಗಳಾದ ಸತ್ಯನಿದಿತೀರ್ಥರೆಂಬ ಚಂದ್ರನನ್ನು ನೋಡಹೊರಟು, ಮಾರ್ಗ ಮಧ್ಯದಲ್ಲಿ ಉದಯಿಸುವ ಪಂಡಿತರ ತಂಡವನ್ನು ಕಂಡು ಎಲ್ಲ ರಾಜರು ತಂದ ಕಾಣಿಕೆಗಳನ್ನು ಅವರಿಗೆ ಅರ್ಪಿಸಿದನು.

**विरचितविबुधेष्टः शिक्षिताशेषदुष्टो**
**विनयगुणविशिष्टः श्रीविलासेन जुष्टः ।**
**अगमदभिनिविष्टो धर्ममार्गे सदिष्टो**
**यतिवरगुणतुष्टः पूःसमीपं स हृष्टः ।।६१।।**

**विरचितेति** । विरचितं विबुधानामिष्टं येन स तथोक्तः । शिक्षिताः अशेषाः दुष्टाः येन स तथोक्तः । विनयेन गुणेन विशिष्टो न तूपलक्षितो सर्वदा विनीत इत्यर्थः । श्रियः सम्पदो विलासेन जुष्टः सेवितः । धर्ममार्गे अभिनिविष्टः अत्यन्तासक्तः, दिष्टेन भाग्येन सहितः । "दिष्टं दैवं भागधेयं भाग्यमि"त्यमरः । यतिवरस्य सत्यनिधेः गुणैस्तुष्टः अनन्तविभुः हृष्टः सन् पुरश्चंजीपुर्याः समीपं अगमत् । मालिनीवृत्तं । "ननमयययुतेयं मालिनी भोगिलोकैः" इति लक्षणात् ।

ಪಂಡಿತರನ್ನು ಸಂತೋಷಗೊಳಿಸಿದ, ಎಲ್ಲ ದುಷ್ಟರನ್ನು ಶಿಕ್ಷಿಸಿದ, ಸರ್ವದಾ ವಿನೀತನಾದ, ಧರ್ಮದಲ್ಲಿ ನಿಷ್ಠನಾದ, ದುರ್ಮಾರ್ಗವನ್ನು ಮೆಟ್ಟಿದ, ಭಾಗ್ಯ-

## -: सप्तमः सर्गः :-

**अथाययौ सत्यनिधिः स शिष्यैश्चंजीपुरं रञ्जितसर्वलोकम् ।**
**धाम श्रियो वारिरुहालयायाः निकेतनं वैभवविभ्रमाणाम् ।।१।।**

**अथेति** । अथ स सत्यनिधिः शिष्यैः सह रञ्जिताः सर्वे लोकाः जनाः येन तत् तथोक्तम् । वारिरुहालयायाः पङ्कजाश्रयायाः श्रियो लक्ष्म्याः धाम, वैभवविभ्रमाणां सम्पद्विलासानां निकेतनं गृहं चंजीपुरं आययौ । अस्मिन् सर्गे वृत्तमुपजातिः ।

ಅನಂತರ ಶ್ರೀಸತ್ಯನಿಧಿಗಳು ಎಲ್ಲ ಸಜ್ಜನರನ್ನು ರಂಜಿಸುವ,ಲಕ್ಷ್ಮೀದೇವಿಗೆ ಆಶ್ರಯವಾದ ಸಂಪತ್ತಿನ ವಿಲಾಸಕ್ಕೆ ನೆಲೆಯಾದ ಚಂಜೀನಗರಕ್ಕೆ ಶಿಷ್ಯಸಮೇತರಾಗಿ ಬಂದರು.

**यत्रावरोहन्तमहार्यदुर्गात्**
**जनं जनः पृच्छति कौतुकेन ।**
**स्वः कीदृशं तत्र किमस्ति रत्न-**
**मनन्तनाम्नोऽस्य विभोः सदृक्षम् ।।२।।**

तदेव नवभिर्वर्णयति । **यत्रेति** । यत्र पुरे जनः आहार्यदुर्गात् पर्वतदुर्गात् । "आहार्यधरपर्वता"इत्यमरः । अवरोहन्तं अधस्तादायन्तं जनं कौतुकेन स्वः स्वर्गः कीदृशम् ? । अव्ययविशेषणत्वात् नपुंसकत्वम् । "स्वरव्ययं"इत्यमरः। तत्र स्वर्गे लोके अनन्तनाम्नः अस्य विभोः सदृक्षं। "[1]दृशो क्स" इति क्सः । "सदृक्ष सदृशः सदृक्"इत्यमरः । रत्नं किं अस्ति ? । इति पृच्छति । अनेन आहार्यदुर्गस्य स्वर्गोन्नत्वं अनन्तविभोः चिन्तारत्नादपि वदान्यत्वं च व्यज्यते ।

ಆ ಚಂಜೀನಗರದ ಪರ್ವತದುರ್ಗಗಳಿಂದ ಇಳಿದು ಬರುವ ಜನರನ್ನು ನೋಡಿ ಊರ ಜನರು ಎರಡು ಪ್ರಶ್ನೆಗಳನ್ನು ಕೇಳಿದರು. ೧. ಸ್ವರ್ಗ ಎಲ್ಲಿದೆ ? ೨. ಸ್ವರ್ಗದಲ್ಲಿ ನಮ್ಮ ರಾಜನಾದ ಅನಂತಪ್ರಭುವಿಗೆ ಸಮಾನವಾದ ರತ್ನ-ವಿದೆಯೇ ? ಎಂದು. ಅಂದರೆ ಆ ಪರ್ವತ ಸ್ವರ್ಗದೆತ್ತರವಿದೆ. ಅನಂತಪ್ರಭು ದಾನಮಾಡುವದರಲ್ಲಿ ಚಿಂತಾಮಣಿಗಿಂತಲೂ ಹೆಚ್ಚು ಎಂದು ಭಾವ.

१. कसोऽपि वाच्यं इति दृशः क्सः ।

**दुर्गे महीध्रे चरतां निशासु शश्वद्भटानां विनिवेशितानाम् ।**
**अतैलपूरा निकटे प्रवृत्ताः प्रदीपिका यत्र भवन्ति ताराः ।।३।।**

**दुर्ग इति** । यत्र पुरे दुर्गे महीध्रे पर्वते । "महीध्रे शिखरिक्ष्माभृदाहार्यधरपर्वता"इत्यमरः । शश्वत् विनिवेशितानां, निशासु चरतां भटानां निकटे समीपे प्रवृत्ताः ताराः नक्षत्राणि, तैलपूररहिताः अतैलपूराः प्रदीपिका भवन्ति ।

ಆ ಊರಿನ ಪರ್ವತದುರ್ಗದಲ್ಲಿ ಸದಾ ವಾಸಿಸುವ ರಾತ್ರಿಯಲ್ಲಿ ಚರಿಸುವ ರಾಜಭಟರಿಗೆ ಸಮೀಪದಲ್ಲಿಯ ನಕ್ಷತ್ರಗಳೇ ಎಣ್ಣೆ ಇಲ್ಲದೇ ಉರಿಯುವ ದೀಪಗಳಾಗಿ ಶೋಭಿಸುತ್ತವೆ.

**कर्णानिलैः कुञ्जरयूथपानां पराहता यत्र पयोदसङ्घाः ।**
**वर्षन्त्युदीर्णस्य महीधरस्य लीना नितम्बान्तरकन्दरेषु ।।४।।**

**कर्णेति** । यत्र पुरे कुञ्जरयूथपानां गजश्रेष्ठानां कर्णानिलैः कर्णतालोत्पन्नवायुभिः पराहताः पयोदसङ्घाः । अनेन गजानां मेघमण्डलौन्नत्यं व्यज्यते । उदीर्णस्य उन्नतस्य महीधरस्य दुर्गस्य नितम्बानां अन्तरे मध्ये ये कन्दराः दर्यः तेषु । "दरी तु कन्दरा वा स्त्री"इत्यमरः । लीनाः सन्तः वर्षन्ति । बलवदाश्रयेण पयोदत्वं निर्वहन्तीति भावः ।

ಆ ಊರಿನಲ್ಲಿ ಆನೆಗಳ ಕಿವಿಗಳಿಂದ ಬೀಸುವ ಗಾಳಿಗಳು ಮೇಘಗಳನ್ನು ಬಡಿಯುತ್ತವೆ. ಆ ಮೇಘಗಳಾದರೂ ಮಹಾಪರ್ವತದ ಸುತ್ತಲಿರುವ ಸಣ್ಣಪರ್ವತ ಗುಹೆಯನ್ನು ಹೊಂದಿ ಮಳೆ ಸುರಿಸುತ್ತವೆ. (ಆನೆಗಳು ಮೇಘ–ಮಂಡಲದಷ್ಟು ಎತ್ತರವೆಂದು ತಿಳಿಯುವುದು).

**सालेन यत्र स्पटिकोज्वलेन प्रकाशमानासु दिशासु शश्वत् ।**
**नक्तं दिवं बोधयतः सरस्सु प्रस्वापबोधौ सरसीरुहाणाम् ।।५।।**

**सालेनेति** । यत्र पुरे स्फटिकोज्वलेन सालेन प्राकारेण शश्वत् अहोरात्रं दिशासु दिक्षु । "टापं चैव हलन्तानां" इति वागुरिमतेन टाप् । प्रकाशमानासु सतीषु सरस्सु सरसीरुहाणां कमलानां प्रस्वापो निमीलनं बोधविकासश्च तौ कर्तारौ नक्तं च दिवा च नक्तं दिवं कर्म अचतुरेत्यादिनिपतनात्साधु । रात्र्यहनि बोधयतः बोधेर्लट् । अहोरात्रपरिज्ञानं पद्मविकासनिमीलने एव कुरुतः । न त्वालोकान्धकाविति भावः ।

ಸ್ಫಟಿಕಮಣಿಗಳಿಂದ, ಉಜ್ವಲವಾದ ಪ್ರಾಕಾರದಿಂದ ಆ ಪುರದಲ್ಲಿ ದಿಕ್ಕು-ಗಳು ಸದಾ ಪ್ರಕಾಶಿಸುತ್ತಿದ್ದವು. ಆದ್ದರಿಂದ ಪೌರಜನರಿಗೆ ರಾತ್ರಿ ಹಗಲುಗಳನ್ನು ತಿಳಿಯಲಾಗುತ್ತಿರಲಿಲ್ಲ. ಆದರೆ ಕಮಲಗಳ ಅರಳುವಿಕೆ ಮತ್ತು ಮುಚ್ಚುವಿಕೆ ಇವುಗಳಿಂದಲೇ ರಾತ್ರಿ ಹಗಲುಗಳನ್ನು ತಿಳಿಯಬೇಕಾಗಿತ್ತು ಹೊರತು ಕತ್ತಲು ಬೆಳಕುಗಳಿಂದಲ್ಲ.

**समस्तशास्त्राधिगमप्रवीणो वदोऽपि लोकः स वदान्य एव ।**
**यस्मिन् निवासी परमोऽपि नित्यं प्रतीयतेऽसौ परमान्य एव।।६।।**

**समस्तेति** । यस्मिन् पुरे निवासी समस्तशास्त्राणां अधिगमेन प्रवीणः यो लोकः सः वदो वक्ताऽपि । "वदावदो वक्ते"त्यमरः । वदादन्यो वदान्य एवेति विरोधः । वदान्यो दानशौण्डेति आभासः । "स्युर्वदान्यस्थूललक्ष्यदानशौण्डाबहुप्रद"इत्यमरः । नित्यं प्रतीयते दृश्यते यो परलोकः । परमोऽपि असौ परमादन्य परमान्य एव । अपरैर्मान्य इति च विरोधाभासः । नित्यं प्रतीयत इत्यनुषङ्गः । इतःप्रभृति पञ्चसु विरोधाभासो द्रष्टव्यः ।

ಆ ಊರಿನ ಜನ ವದನೂ (ವಾಗ್ಮಿಯೂ) ಹೌದು. ವದಾನ್ಯ (ದಾನಶೌಂ-ಡ) ನೂ ಹೌದು. ಪರಮ (ಶ್ರೇಷ್ಠ) ನೂ ಹೌದು. ಪರಮಾನ್ಯ (ಪರದಿಂದ ಮಾನ್ಯನಾದವ) ನೂ ಹೌದು.

**यो ब्रह्मवित्तापहतौ प्रवृत्तो ब्रह्मण्य एवाभिविराजते सः ।**
**स दारयुक्तो विचकास्ति यस्मिन् यो विप्रयोगेन विनीतकालः।।७।।**

**य इति** । यस्मिन् पुरे जनः ब्रह्मवित्तस्य अपहतौ ब्रह्मविदां तापहतौ च प्रवृत्तः स ब्रह्मण्यः ब्राह्मणेषु साधुरेव अभिविराजते । यो विप्रयोगेन स्त्रीवियोगेन, विप्रैः योगेन चेति । विनीतकालः स दारैः कलत्रेण युक्त एव विचकास्ति ।

ಆ ಊರಲ್ಲಿ ಬ್ರಹ್ಮವಿತ್ತಾಪಹರಣದಲ್ಲಿ (ಬ್ರಹ್ಮವಿತ್-ಬ್ರಹ್ಮನನ್ನು ತಿಳಿದವರ ತಾಪಹರಣ-ತಪಹರಣದಲ್ಲಿ) ಪ್ರವೃತ್ತನಾದವನೇ ಬ್ರಾಹ್ಮಣರಲ್ಲಿ ಶ್ರೇಷ್ಠನಾಗಿ ಶೋಭಿಸುತ್ತಾನೆ. ಯಾವನು ವಿಪ್ರಯೋಗದಿಂದ (ವಿಪ್ರರ ಸುಯೋಗದಿಂದ) ಕಾಲಕಳೆಯುತ್ತಾನೋ ಅವನೇ ಪತ್ನಿಯುತನಾಗಿ ಶೋಭಿಸುತ್ತಾನೆ.

**पराक्रमाक्रान्तदिगन्तराणां यस्मिन् जयश्रीप्रथमाननाम्नाम् ।**
**धनुर्धराणां विशिखाः परेषु सन्तापयन्तः शिखिनो भवन्ति ।।८।।**

**पराक्रमेति** । यस्मिन् पुरे पराक्रमेण आक्रान्ताणि दिगन्तराणि यैस्ते तथोक्ताः । तेषां जयश्रिया प्रथमानानि प्रख्यातिमन्ति नामानि येषां । तेषां धनुर्धराणां सन्तापयन्तो विशिखाः बाणाः परेषु शत्रुषु शिखिनो वह्नयः भवन्ति । विशिखानां शिखित्वं विरोधाभासेन द्रष्टव्यम् ।

ಆ ಊರಲ್ಲಿ ಪರಾಕ್ರಮದಿಂದ ಎಲ್ಲ ದಿಕ್ಕುಗಳನ್ನು ಗೆದ್ದ, ತಮ್ಮ ಜಯಶ್ರೀಯಿಂದ ಪ್ರಖ್ಯಾತರಾದ ಬಿಲ್ಲುಗಾರರ (ವಿಶಿಖಿಗಳು) ಬಾಣಗಳು ಪರಸೈನ್ಯವನ್ನು ತಾಪಗೊಳಿಸುತ್ತಾ (ಶಿಖಿಯಂತೆ) ಬೆಂಕಿಯಂತೆ ತೋರುತ್ತವೆ.

**विश्राणनोद्रिक्तमहाविभूतिप्रभावसंवर्धितभूरिभोगाः ।**
**स्वयं सपत्रा अपि यत्र लोकाः भवन्ति शश्वज्जगतो विपत्राः ।।९।।**

**विश्राणनेति** । यत्र पुरे विश्राणनेन दानेन । विश्राणनं वितरणं स्पर्शनं प्रतिपादनमित्यमरः । उद्रिक्ता उद्युक्ता या महाविभूतिः ऐश्वर्यं तस्याः प्रभावेन संवर्धिताः भूरिभोगाः येषां ते लोकाः जनाः स्वयं सपत्राः सवाहनाः अपि "पत्रं वाहनपक्षयोरि"त्यमरः । शश्वज्जगतः विपदः त्रायन्त इति विपत्राः भवन्ति ।

ಆ ಊರಿನಲ್ಲಿ ದಾನಮಾಡುವುದರಿಂದ ಮಹಾ ಐಶ್ವರ್ಯ ಸಂಪನ್ನರಾದ ಜನರು ಐಶ್ವರ್ಯದ ಪ್ರಭಾವದಿಂದ ಅನೇಕ ವಿಧವಾದ ಭೋಗಗಳನ್ನು ಹೊಂದಿದವರು, ಅವರು ಸಪತ್ರ (ವಾಹನದಿಂದ ಸಹಿತ) ರಾದರು. ಜನರಿಗೆ ವಿಪತ್ರ (ವಿಪತ್ತುಗಳಿಂದ ರಕ್ಷಣೆ ನೀಡುವವ)ರು.

**प्रभूतचारुप्रसवोज्वलेषु वनेषु साधुष्वथ वा जनेषु ।**
**न दृश्यते कश्चिदुदीयमानो विपल्लवो यत्र समृद्धिभाजि ।।१०।।**

**प्रभूतेति** । समृद्धिभाजि यत्र पुरे प्रभूतेः चारुभिः प्रसवैः पुष्पैः सन्तानैश्च उज्वलेषु रम्येषु, वनेषु अथवा साधुषु सभ्येषु जनेषु उदीयमानः वृक्षलतादिरूपः । विगतपल्लवः विपदो लवश्च न दृश्यते ।

ಸಮೃದ್ಧವಾದ ಆ ಪುರದಲ್ಲಿರುವ ಪುಷ್ಪಗಳಿಂದ ಉಜ್ವಲವಾದ ವನಗಳಲ್ಲಿ ಮತ್ತು ಸಭ್ಯರಾದ ಸಂತಾನದಿಂದ ಕೂಡಿದ ಜನಗಳಲ್ಲಿ ವಿಪಲ್ಲವ ಕಾಣಿಸಲಿಲ್ಲ. ವನಗಳಲ್ಲಿ (ವಿ–ಇಲ್ಲದೇ ಹೊದ ಪಲ್ಲವ–ಚಿಗುರುಗಳು) ಚಿಗುರಿನ ಅಭಾವ

ಕಾಣಲಿಲ್ಲ ವನ ಚಿಗುರೊಡೆದವು. ಜನರು ವಿಪತ್ತಿನ ಲವ – ಲೇಶ ವಿಲ್ಲದೇ ಸುಖಶಾಂತಿಯಿಂದ ಬಾಳುತ್ತಿದ್ದರು.

**पुरं तदा सत्यनिधिः क्षमीन्द्रो विशन्ननन्तप्रभुणोपनीतम् ।**
**स राजबाह्यं गजमध्यरोहत् प्रत्युप्तरत्नोज्वलभद्रपीठम् ।।११।।**

**पुरमिति** । पुरं विशन् स सत्यनिधिः क्षमीन्द्रः तदा अनन्तप्रभुणा उपनीतं । प्रत्युप्तैः खचितैः रत्नैः उज्वलं भद्रपीठं सिद्धासनं यस्मिन् तथाभूतं राजबाह्यं गजं अध्यरोहत् ।

ಅಂಥಃಪುರವನ್ನು ಪ್ರವೇಶಿಸುವ ಶ್ರೀಸತ್ಯನಿಧಿತೀರ್ಥರು ಅನಂತಪ್ರಭುವಿನ ಪಟ್ಟದಾನೆಯ ಮೇಲೆ ಇರಿಸಿದ ರತ್ನ ಖಚಿತ ಭದ್ರಪೀಠವನ್ನೇರಿದರು.

**पुरं विशन्तं यतिवंशकेतुमाकर्ण्य पौराः परितः सदाराः ।**
**आलोकमार्गं सहसाभिपेतुः संरम्भविक्षिप्तसलीलयाताः ।।१२।।**

**पुरमिति** । सदाराः पौराः पुरं विशन्तं यतिवंश एव वंशो दण्डः तस्य केतुः तं सत्यनिधिं आकर्ण्य । सहसा संरम्भेण वेगेन विक्षिप्तानि त्यक्तानि सलीलानि यातानि गमनानि यैः ते तथाभूताः सन्तः परितः समन्ततः आलोकमार्गं दर्शनयोग्यं राजपथं अभिपेतुः अभिमुख्येन आगता इत्यर्थः ।

ಯತಿವಂಶಕ್ಕೆ ಧ್ವಜದಂತಿರುವ ಶ್ರೀಸತ್ಯನಿಧಿಗಳು ಬರುವುದನ್ನು ತಿಳಿದ ಪೌರರು ತಮ್ಮ ಮಕ್ಕಳು, ಪರಿವಾರದಿಂದ ಸಹಿತರಾಗಿ ವೇಗದಿಂದ ರಾಜ ಪಥವನ್ನು ಹೊಂದಿದರು.

**सखीजनस्य ग्रथनाय दातुं मुक्ताफलान्यंजलिना वहन्ति ।**
**श्रुत्वागतं तं त्वरया जगाम पुष्पांजलिं काचिदिवार्पयन्ति ।।१३।।**

**सखीति** । ग्रथनाय सन्दर्भाय सखीजनस्य दातुं मुक्ताफलानि अञ्जलिना वहन्ति । काचित् आगतं सत्यनिधिं श्रुत्वा पुष्पाञ्जलिं अर्पयन्तीव त्वरया सम्भ्रमेण आजगाम ।

ಈ ಸಂದರ್ಭದಲ್ಲಿ ಒಬ್ಬಳು ಮುತ್ತಿನ ಹಾರವನ್ನು ಹೆಣೆಯಲು, ತನ್ನ ಗೆಳೆ– ತಿಗೆ ಮುತ್ತುಗಳನ್ನು ಕೊಡಲು, ಕೈಗಳಲ್ಲಿ ಹಿಡಿದು ಹಾಗೇ ರಾಜ ಮಾರ್ಗದತ್ತ ಬಂದಳು. ಅವಳು ಬರುತ್ತಿರುವುದು ಶ್ರೀಸತ್ಯನಿಧಿಗಳಿಗೆ ಪುಷ್ಪಾಂಜಲಿಯನ್ನು ಅರ್ಪಿಸಲು ಬರುತ್ತಿರುವಂತೆ ತೋರುತ್ತಿತ್ತು.

**काचित्तदालोकनकौतुकोद्यद्विलोलनेत्रप्रभयान्तरीक्षे ।**
**उत्फुल्लनीलोत्पलपत्रराजिविराजितं तोरणमाबबन्ध ।।१४।।**

**काचिदिति** । काचित् तस्य सत्यनिधेः आलोकनकौतुकेन उद्यत्या उदीयमानया विलोलनेत्रयोः प्रभया अन्तरीक्षे उत्फुल्लनीलोत्पलपत्राणां राज्या पङ्क्त्या विराजितं विरचितं इत्यर्थः । तोरणं वनमालां आबद्ध-नेत्रप्रभैव उत्पलतोरणसमा अभूदित्यर्थः ।

ಆಗ ಅಲ್ಲಿ ಮತ್ತೊಬ್ಬ ಮಹಿಳೆ ಶ್ರೀಸತ್ಯನಿಧಿತೀರ್ಥರನ್ನು ಕಾಣಬೇಕೆಂಬ ಕೌತುಕದಿಂದ ತನ್ನ ನೀಲಕಮಲದಂತಿರುವ ಕಣ್ಣುಗಳನ್ನು ಅಂತರಿಕ್ಷದ ಕಡೆ ಹರಿಸಿದಳು. ಆಗ ಅದು ಶ್ರೀಸತ್ಯನಿಧಿಗಳಿಗಾಗಿ ಕಟ್ಟಿದ ನೀಲಕಮಲದಳ ತೋರಣದಂತೆ ಕಂಡಿತು.

**करस्फुरत्कङ्कणकोटिनद्धरत्नाश्मरश्मिच्छुरितेन काचित् ।**
**भक्त्युद्गतेनाञ्जलिना नमत्तं नीराजनं सार्चिरिवादधाना ।।१५।।**

**करेति** । काचित् करयोः स्फुरतोः कङ्कणयोः कोटिषु अग्रेषु नद्धानां निबद्धानां रत्नाश्मनां पद्मरागमणीनां रश्मिभिः छुरितेन व्याप्तेन भक्त्या उद्गतेन अञ्जलिना अर्चिभिः ज्वालाभिः सहितं सार्चि नीराजनं आदधा-नेव तं सत्यननिधिं अनमत् ।

ಒಬ್ಬ ಮಹಿಳೆ ಕರಗಳನ್ನು ಎತ್ತಿ ನಮಸ್ಕರಿಸಿದಳು. ಅವಳು ಕೈಗಳಲ್ಲಿ ಪದ್ಮ-ರಾಗ ಮಣಿಗಳಿಂದ ಯುಕ್ತವಾದ ಬಂಗಾರದ ಕಂಕಣಗಳನ್ನು ಧರಿಸಿದ್ದಳು. ಅವುಗಳ ಕಾಂತಿಯಿಂದ ಗುರುಗಳಿಗೆ ನೀರಾಜನೆ ಮಾಡುವಂತೆ ತೋರುತ್ತಿತ್ತು ಅವಳ ನಮನ.

**तद्दर्शनोद्वेलनिजप्रमोदसुधापरीवाहनिभेन काचित् ।**
**स्मितोद्गमेनावकिरत्यराजदाचारलाजानिव शुद्धभावा ।।१६।।**

तद्दर्शनेति । शुद्धो भावो भक्तिः यस्याः सा । काचित् तस्य सत्यनिधेः दर्शनेन उद्वेलायाः परिपूर्णायाः निजप्रमोदसुधायाः परीवाहस्य जलोच्छ्वासस्य । "जलोच्छ्वासाः परीवाह" इत्यमरः । निभेन सदृशेन स्मितस्य उद्गमेन आचारान् माङ्गलिकान् लाजान् अवकिरन्तीव अराजत्।

ಬಹಳ ಭಕ್ತಿಯುತಳಾದ ಒಬ್ಬ ಸ್ತ್ರೀ ಶ್ರೀಸತ್ಯನಿಧಿಗಳನ್ನು ನೋಡುವುದ-ರಿಂದ ಪರಿಪೂರ್ಣಗೊಂಡ ಸಂತೋಷ ಸುಧಾ ಪ್ರವಾಹದಂತೆ ಇರುವ,

ಮಂದ ಹಾಸವನ್ನು ಬೀರಿದಳು. ಅದು ಮಂಗಳಕ್ಕೆಂದು ಸುರಿಸುವ ಬತ್ತರಳಿ-ನಂತೆ ತೋರುತ್ತಿತ್ತು.

**तं निर्विकारं यतिवंशरत्नमायान्तमाकर्ण्य च राजदाराः ।**
**प्रासादवातायनसंनिविष्टाः भक्त्युद्गतैरञ्जलिभिः प्रणेमुः ।।१७।।**

**तमिति** । किञ्च राजदाराः यतिवंश एव वंशः तस्य रत्नं निर्विकारं आयान्तं तं सत्यनिधिं आकर्ण्य प्रासादनां वातायनेषु गवाक्षेषु संनिविष्टाः सत्यः भक्त्युद्गतैः अञ्जलिभिः प्रणेमुः ।

ರಾಜನ ಮಡದಿಯರು, ಯತಿವಂಶರತ್ನರಾದ ನಿರ್ವಿಕಾರರಾದ ಶ್ರೀಸತ್ಯನಿಧಿಗಳು ಬರುವದನ್ನು ಕೇಳಿ ಅಂತಃಪುರದ ಕಿಟಕಿಗಳಿಂದ ಭಕ್ತಿಯಿಂದ ಕೈಮುಗಿದರು.

**शताङ्गपत्तिद्विरदाश्ववारैरथ्यासु संबाधनिरोधितासु ।**
**प्रासादराजीरधिरुह्य पौरा जजल्पुरन्योन्यमुदारवाचः ।।१८।।**

**शताङ्गेति** । शताङ्गाः रथाः पत्तयः पदातयः द्विरदाः गजाः अश्वाश्च तेषां वारैः सङ्घैः । "वारसङ्घातसञ्चया" इत्यमरः । रथ्यासु प्रतोलीषु "रथ्याप्रतोलीविशिखे"त्यमरः । सम्बाधेन सङ्कटेन निरोधितासु सतीषु पौराः प्रासादानां राजीः पङ्क्तीः अधिरुह्य उदारवाचः सन्तः अन्योन्यं प्रश्नोत्तररूपेण जजल्पुः भाषितवन्तः ।

ಆಗ ರಾಜ ಮಾರ್ಗವು, ರಥ, ಗಜ, ಅಶ್ವ, ಪದಾತಿ ಇವರ ಸಮೂಹ-ಗಳಿಂದ ನಿರೋಧಹೊಂದಲು ಪೌರರೆಲ್ಲ ಅಂತಃಪುರಗಳ ಸಾಲುಗಳನ್ನು ಏರಿ ಪರಸ್ಪರ ಸಂಭಾಷಿಸಿದರು.

**कोऽयं गजस्कन्धविराजमानोऽनन्तप्रभूच्चालितचामराङ्कः ।**
**श्रीमध्वशास्त्राम्बुधिवृद्धिहेतुगोसन्ततिः सत्यनिधीन्दुरेषः ।।१९।।**

अन्योन्यजल्पनमेव पञ्चभिराह **क** इति । गजस्य स्कन्धे विराजमानः अनन्तप्रभुणा उच्चालितं वीजितं चामरमेव अङ्को लक्ष्म यस्य सः तथोक्तः । अयं कः इति कस्यचित् प्रश्नः । कश्चिदुत्तरमाह । **श्रीति** । श्रीमध्वशास्त्राम्बुधेः वृद्धिहेतुः गवां वाचां किरणानां च सन्ततिर्यस्य स एषः । सत्यनिधिः इन्दुरिव सत्यनिधीन्दुः ।

ಅವರ ಸಂಭಾಷಣೆಯನ್ನು ಹೇಳುತ್ತಾರೆ.

ಒಬ್ಬ ಕೇಳಿದ. ಆನೆಯ ಮೇಲೆ ಕುಳಿತು ನಮ್ಮ ದೊರೆ ಅನಂತಪ್ರಭುವಿ-ನಿಂದ ಚಾಮರವನ್ನು ಬೀಸಿಸಿಕೊಳ್ಳುತ್ತಿರುವವರು ಯಾರು ?

ಮತ್ತೊಬ್ಬ ಹೇಳಿದ. ಅವರು ಶ್ರೀಮನ್ ಮಧ್ವಶಾಸ್ತ್ರಸಾಗರವನ್ನು ಅಭಿವೃದ್ಧಿಗೊಳಿಸುವ ಶ್ರೀಸತ್ಯನಿಧಿಗಳೆಂಬ ಚಂದ್ರರು.

**वयस्य मुक्तामणिदीपितेन श्वेतातपत्रेण विलक्षितः कः ।**
**जगत्रयीछत्रयशोवितानः स एष सत्यव्रतभिक्षुशिष्यः ।।२०।।**

**वयस्येति** । हे वयस्य हे सखे मुक्तामणिभिः दीपितेन श्वेतातपत्रेण विलक्षितः । क इति प्रश्नः । उत्तरन्तु जगत्रय्याः छत्रभूतं यशसो वितानं यस्य सः एषः सत्यव्रतभिक्षोः शिष्यः ।

ಒಬ್ಬ – ಮುತ್ತಿನಿಂದ ಹೆಣೆಯಲ್ಪಟ್ಟ ಶ್ವೇತಛತ್ರದಿಂದ ಶೋಭಿಸುವವರಾರು ?

ಮತ್ತೊಬ್ಬ – ಮೂರು ಲೋಕಕ್ಕೆ ಶ್ವೇತಾತಪತ್ರದಂತಿರುವ ಯಶಸ್ಸುಳ್ಳ ಶ್ರೀಸತ್ಯವ್ರತರ ಶಿಷ್ಯರಾದ ಶ್ರೀಸತ್ಯನಿಧಿಗಳು.

**सवाहनानां बुधमण्डलानां मध्येचरः कोनु कषायवासाः ।**
**शिष्यायमाणाखिलशास्त्रविद्यः स सत्यनाथस्य गुरुर्यतीन्द्रः ।।२१।।**

**सवाहनानामिति** । सवाहनानां बुधमण्डलानां विद्वत्सङ्घानां, मध्ये चरतीति मध्येचरः । कषायेण रक्तं वासो यस्य सः । कोनु इति प्रश्ने उत्तरमाह । **शिष्येति** । शिष्यायमाणाः शिष्यवदाचरन्त्यः अखिलाः शास्त्रविद्या यस्य स यतीन्द्रः सत्यनाथयतेः गुरुः ।

ಒಬ್ಬ ಕೇಳಿದ – ವಾಹನಗಳಿಂದ ಸಹಿತರಾದ ಪಂಡಿತಮಂಡಲಗಳ ಮಧ್ಯದಲ್ಲಿ ಕಾಷಾಯ ವಸ್ತ್ರವನ್ನು ಧರಿಸಿ ಬರುವವರು ಯಾರು ?

ಮತ್ತೊಬ್ಬನ ಉತ್ತರ – ಸಮಸ್ತ ಶಾಸ್ತ್ರವಿದ್ಯೆಗಳನ್ನು ವಶದಲ್ಲಿಟ್ಟುಕೊಂಡ ಶ್ರೀಸತ್ಯನಾಥರ ಗುರುಗಳು. ಯತಿಸಾರ್ವಭೌಮರು.

**कोऽनन्तराजानुजकेशवार्यपुरस्समुत्सारितसैन्यसङ्घः ।**
**प्रचण्डवाग्बाणगणावधूतविपक्षधीरः स यतिप्रवीरः ।।२२।।**

**क इति** । अनन्तराजस्य प्रभोः अनुजेन केशवार्येण पुरः अग्रे समुत्सारितः सैन्यानां सङ्घो यस्य सः क इति प्रश्नः । उत्तरन्तु प्रचण्डैः

वाग्बाणगणैः अवधूताः निरस्ताः विपक्षाः वैरिणः धीराः पण्डिताः येन सः यतिषु प्रवीरः ।

ಅನಂತಪ್ರಭುವಿನ ತಮ್ಮ ಕೇಶವಪ್ರಭು. ಅವನು ಸೈನ್ಯವನ್ನು ಮುಂದೆ ಪ್ರೇರಿಸುತ್ತಿದ್ದಾನೆ. ಅಂತಹ ಸೈನ್ಯದ ಹಿಂದೆ ವಿರಾಜಿಸುತ್ತಿರುವವರು ಯಾರು? ಎಂದು ಒಬ್ಬ ಕೇಳಿದ.

ಪ್ರಚಂಡವಾದ, ವಾಗ್‌ಬಾಣಗಳಿಂದ ದುರ್ವಾದಿಗಳನ್ನು ದೂರ ಅಟ್ಟಿದ ಮಹಾಪ್ರವೀರರಾದ ಯತಿಪುಂಗವರಾದ ಶ್ರೀಸತ್ಯನಿಧಿಗಳು. ಎಂದು ಮತ್ತೊಬ್ಬ ಹೇಳಿದ.

**विचित्रवादित्रवरैः पुरःस्तादुद्घोषितः कः कलिताक्षमालः ।**
**पाण्डित्यलक्ष्मीपटहायमानवागेष भो वेदनिधेः प्रशिष्यः ।।२३।।**

**विचित्रेति** । पुरस्तात् विचित्राणां वादित्राणां चतुर्विधवाद्यानां रवैः शब्दैः । "चतुर्विधमिदं वाद्यं वादित्रातोद्यनामकमि"त्यमरः । उद्घोषितः सञ्जातोद्घोषः । कलिता धृता अक्षमाला येन स क ? इति प्रश्ने । उत्तरमाह । पाण्डित्येति । पाण्डित्यलक्ष्म्याः पटहायमाना आनकवदाचरन्ती वाक् यस्य स एषः । भोः इति सम्बोधनं । वेदनिधेः प्रशिष्यः ।

ಮುಂದೆ ವಿಚಿತ್ರವಾದ ವಾದ್ಯಗಳ ಘೋಷದೊಂದಿಗೆ ಕೊರಳಲ್ಲಿ ಕಮಲಾಕ್ಷಿಮಾಲೆಯನ್ನು ಧರಿಸಿದವರಾರು ? ವಿದ್ವತ್ ಸಾಮ್ರಾಜ್ಯದ ಭೇರಿಯಂತಿರುವ ವಾಗ್ಮಿಗಳಾದ ಶ್ರೀವೇದನಿಧಿಗಳ ಪ್ರಶಿಷ್ಯರು.

**इत्थं वदैः पौरजनैः प्रहर्षात् प्रसूनवर्षैरवकीर्यमाणः ।**
**तेजोनिधिः सत्यनिधिर्विरेजे नक्षत्रसङ्घैः सहितः शशीव ।।२४।।**

**इत्थमिति** । इत्थं अनेन प्रकारेण प्रहर्षात् वदैः वदद्भिः । "वदेः पचाद्यच्" । पौरजनैः कर्तृभिः । प्रसूनवर्षैः करणैः । अवकीर्यमाणः । तेजसां निधिः सत्यनिधिः नक्षत्रसङ्घैः सहितः शशीव विरेजे ।

ಈ ರೀತಿ ಪರಸ್ಪರ ಸಂಭಾಷಿಸುತ್ತಾ ಅಂತ್ಯಂತಹರ್ಷದಿಂದ ಪುರವಾಸಿಗಳು ಹೂವಿನ ಮಳೆಗೆರದರು. ಆಗ ತೇಜೋನಿಧಿಗಳಾದ ಶ್ರೀಸತ್ಯನಿಧಿಗಳು ನಕ್ಷತ್ರ ಮಂಡಲದಲ್ಲಿ ಚಂದ್ರನಂತೆ ಶೋಭಿಸಿದರು.

**निराञ्जनैर्माङ्गलिकैरुदस्तै रेजे स पृथ्वीसुरकामिनीभिः ।**
**निजप्रतापैरिव मूर्तिमद्भिः दिग्भिः समन्तादुपनीयमानैः ।।२५।।**

**नीराजनैरिति** । स सत्यनिधिः पृथ्वीसुरकामिनीभिः ब्राह्मणस्त्रीभिः उदस्तैः उत्क्षिप्तैः माङ्गलिकैः नीराजनैः दिग्भिः समन्तात् उपनीयमानैः समीपं प्राप्यमाणैः मूर्तिमद्भिः प्रतापैरिवेति उत्प्रेक्षा रेजे ।

ಶ್ರೀಸತ್ಯನಿಧಿಗಳಿಗೆ ಬ್ರಾಹ್ಮಣಸುಮಂಗಲೀಯರು ಮಂಗಳ ನೀರಾಜನವನ್ನು ಮಾಡಿದರು. ಆಗ ಗುರುಗಳ ಸಮೀಪಕ್ಕೆ ಬರುತ್ತಿರುವ ಮೂರ್ತಿಮತ್ತಾದ ತಮ್ಮ ಪ್ರತಾಪಗಳಿಂದ ಉಪೇತರಾದಂತೆ ಶೋಭಿಸಿದರು.

**सान्द्रीभवत्केतुधुतप्रकाशे प्रसूनगन्धावहगन्धवाहे ।**
**सङ्गच्छमानः स हि राजमार्गे प्रोद्यन्निवार्को निखिलैर्ववन्दे ।।२६।।**

**सान्द्रीति** । सान्द्रीभवद्भिः निरन्तरैः केतुभिः ध्वजैः धुतः निवारितः प्रकाशः आलोको यस्मिन् तस्मिन् तथोक्ते । प्रसूनगन्धानां पुष्पपरिमलानां आवहो वोढा गन्धवाहो वायुः यस्मिन् तस्मिन् राजमार्गे । अन्यत्र राज्ञः चन्द्रस्य मार्गे आकाशे इत्यर्थः । सङ्गच्छमानः गच्छन् । समोगम्यृच्छीति सम्पूर्वात् गमेः आत्मनेपदं शानच् । सः सत्यनिधिः प्रोद्यन् उदीयमानः अर्क इव निखिलैर्ववन्दे । कर्मणि लिट् । यथा उदीयमानो अर्कः सर्वैः वन्दितो भवति तद्वदिति भावः ।

ಶ್ರೀಸತ್ಯನಿಧಿಗಳು ರಾಜಮಾರ್ಗದಲ್ಲಿ ಹೊರಟಾಗ ಧ್ವಜಗಳು ಸೂರ್ಯನ ರಶ್ಮಿಗಳನ್ನು ತಡೆಯುತ್ತಿದ್ದವು. ಮಂದಮಾರುತವು ಪುಷ್ಪಪರಿಮಳವನ್ನು ಹೊತ್ತು ತರುತ್ತಿತ್ತು. ಇಂಥ ಮಾರ್ಗದಲ್ಲಿ ಹೊರಟಿರುವ ಶ್ರೀಸತ್ಯನಿಧಿಗಳು ಉದಯಿಸುವ ಸೂರ್ಯನಂತೆ ಎಲ್ಲರಿಂದ ವಂದಿತರಾದರು.

**अनन्तनाम्ना प्रभुणोपदिष्टं धामाभिरामं यतिसार्वभौमः ।**
**तद्भाग्यलक्ष्म्याः स नवावतार इवाविशत् राजपथात्सयूथः ।।२७।।**

**अननेति** । सयूथः सपरिवारः यतिसार्वभौमः स सत्यनिधिः राजपथात् अनन्तनाम्ना प्रभुणा उपदिष्टं दर्शितं अभिरामं धाम गृहं तस्य अनन्तप्रभोः भाग्यलक्ष्म्याः नवावतारः नूतनप्रादुर्भाव इव आविशत् ।

ಶ್ರೀಸತ್ಯನಿಧಿಗುರುಸಾರ್ವಭೌಮರು ಪರಿವಾರದಿಂದ ಸಹಿತರಾಗಿ ರಾಜ-ಮಾರ್ಗದಿಂದ ಬರುತ್ತಾ ಅನಂತಪ್ರಭುವಿನಿಂದ ತೋರಿಸಲ್ಪಟ್ಟ ರಮ್ಯವಾದ ಗೃಹವನ್ನು, ಅನಂತಪ್ರಭುವಿನ ನೂತನ ಭಾಗ್ಯಲಕ್ಷ್ಮಿಯಂತೆ ಪ್ರವೇಶಿಸಿದರು.

**स बन्दिवैतालिकगायकानां कोलाहलैरुल्लसितेऽध्यतिष्ठत् ।**
**तत्रोपक्लृप्तं मणिपुञ्जमञ्जुभद्रासनं शिष्यकरावलम्बः ।।२८।।**

**स बन्दिति** । स सत्यनिधिः शिष्यस्य अनन्तविभोः करावलम्बः कर एव अवलम्बो यस्य स तथोक्तः सन् बन्दिनः स्तुतिपाठकाः वैतालिका बोधकराः गायकाश्च तेषां कोलाहलैः उल्लसिते तत्र धाम्नि उपक्लृप्तं मणिपुञ्जैः रत्नसङ्घैः मञ्जु मनोहरं भद्रासनं सिंह्वासनं अध्यतिष्ठत् अध्यरोहत् । अधिशीङ्स्थासेति कर्मत्वम् ।

ಸ್ತುತಿಪಾಠಕರು, ಗಾಯಕರು ಮುಂತಾದವರ ಕೋಲಾಹಲದಿಂದ ಕೂಡಿದ ಅರಮನೆಯಲ್ಲಿ ಶ್ರೀಸತ್ಯನಿಧಿಗಳು ಶಿಷ್ಯನಾದ ಅನಂತ ವಿಭುವಿನ ಕರವನ್ನು ಹಿಡಿದು ಅರಮನೆಯ ಮಣಿಗಳ ಸಮೂಹದಿಂದ ಮನೋಹರ-ವಾದ ಸಿಂಹಾಸನವನ್ನು ಏರಿದರು.

**श्रीमानन्तप्रभुरस्य भिक्षोः पूजां वितन्वन् पुरुहूतसम्पत् ।**
**नवाम्बुपूरैः पदमभ्यषिञ्चत् शिरश्च शुद्धैर्नवरत्नसङ्घैः ।।२९।।**

**श्रीमानिति** । पुरुहूतस्य इन्द्रस्य सम्पदिव सम्पद्यस्य स तथोक्तः । श्रीमान् अनन्तप्रभुः अस्य भिक्षोः सत्यनिधेः पूजां वितन्वन् पदं पादं नवाम्बुपूरैः अभ्यषिञ्चत् । शिरश्च शुद्धैः नवरत्नसङ्घैः अभ्यषिञ्चत् ।

ಇಂದ್ರನ ಸಂಪತ್ತಿನಂಥ ಸಂಪತ್ತುಳ್ಳ ಅನಂತಪ್ರಭುವು ಶ್ರೀಸತ್ಯನಿಧಿಗಳಿಗೆ ಉತ್ತಮವಾದ ಜಲಗಳಿಂದ ಪಾದಪೂಜೆಯನ್ನು ಮತ್ತು ನವರತ್ನಸಮೂಹ-ದಿಂದ ಅಭಿಷೇಕವನ್ನು ಮಾಡಿದನು.

**पुरीमुदारामुपलब्धसारं भ्रातॄंश्च पुत्रानपि सच्चरित्रान् ।**
**श्रीमाननन्तो जगदेककान्तो ददौ स देशान्गुरवे सकोशान्।।३०।।**

**पुरीमिति** । जगतः एककान्तो मुख्यतया मनोहरः अनन्तः श्रीमान् प्रभुः उपलब्धाः साराः यस्यां तां उदारां पुरीं सच्चरित्रान् भ्रातॄन् पुत्रानपि सकोशान् देशानपि गुरवे सत्यनिधये ददौ समर्पितवान् ।

ಜಗತ್ತಿಗೆ ಮನೋಹರನಾದ ಅನಂತಪ್ರಭುವು ಸತ್ವಭರಿತವಾದ ತನ್ನ ಚಂಜೀಪುರವನ್ನು, ಸಚ್ಚರಿತ್ರರಾದ ತಮ್ಮಂದಿರು, ಮಕ್ಕಳು, ಕೋಶಗಳಿಂದ ಸಹಿತವಾದ ದೇಶವನ್ನು ಗುರುಗಳಾದ ಶ್ರೀಸತ್ಯನಿಧಿಗಳಿಗೆ ಸಮರ್ಪಿಸಿದನು.

**उभावभूतां स्तवनीयशीलौ जनस्य चञ्जीनगरस्थितस्य ।**
**गुरुर्न किञ्चित्स्पृहयालुरर्थे शिष्यश्च सर्वस्वसमर्पणेच्छुः ।।३१।।**

**उभाविति** । चञ्जीनगरस्थितस्य जनस्य उभौ स्तवनीयं स्तुत्यं शीलं तद्वृत्तं ययोः तावभूताम् । ता उभौ कौ इत्यपेक्षायामाह । गुरुरिति । अर्थे वित्तविषये न किञ्चित् स्पृहयालुः ईषदप्यनपेक्षमाणः गुरुः । सर्वस्वस्य समर्पणेच्छुः इच्छावान् । बिन्दुरिछुरिति निपातनात् साधु । शिष्यश्च ।

ಶ್ರೀಸತ್ಯನಿಧಿಗಳು ಹಾಗೂ ಅನಂತಪ್ರಭು ಇಬ್ಬರನ್ನು ಪುರದಲ್ಲಿರುವವರಿಗೆ ಹಾಡಿ ಹೊಗಳುವ ಚರ್ಯದವರಾಗಿದ್ದರು. ಅಂದರೆ ಗುರುಗಳು ಏನೂ ಬೇಡದವರು, ಶಿಷ್ಯನು ಎಲ್ಲವನ್ನು ಸಮರ್ಪಿಸುವವನು.

**शिष्येण राज्यादि यदर्पितं तत् गुरुः स तस्मै कृपयान्वदत्त ।**
**यदर्पितं प्रार्थनया पुनस्तद्वित्तं चकार द्विजसादशेषम् ।।३२।।**

**शिष्येणेति** । स सत्यनिधिः शिष्येण अनन्तप्रभुणा राज्यादि यदर्पितं तस्मै शिष्याय कृपया अन्वदत्त । पुनः प्रार्थनया यद्वित्तं अर्पितं तदशेषं द्विजसात् बाह्मणाधीनं चकार ।

ಗುರುಗಳಾದ ಶ್ರೀಸತ್ಯನಿಧಿಗಳು ರಾಜನು ಅರ್ಪಿಸಿದ ರಾಜ್ಯಾದಿಗಳನ್ನು ಪುನಃ ಆತನಿಗೆ ಕೊಟ್ಟರು. ಮತ್ತೆ ಪ್ರಾರ್ಥನಾ ಪೂರ್ವಕ ಸಮರ್ಪಿಸಿದ ಕನಕಾದಿಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದರು.

**शिष्यस्य भक्तिर्महिमा गुरोश्च द्वयं नितान्तं व्यतिभासमानम् ।**
**अलोकदिष्टत्रयदृष्टसाम्यं बभूव वाचां विषयः कवीनाम् ।।३३।।**

**शिष्यस्येति** । नितान्तं व्यतिभासमानं परस्परमुद्दिश्य भासमानमित्यर्थः । लोकदिष्टत्रययोः लोकत्रयकालत्रययोः दृष्टसाम्यं न विद्यते यस्य तत् अलोकदिष्टत्रयदृष्टसाम्यं । "कालोदिष्टोऽप्यनेहापि"इत्यमरः । शिष्यस्य भक्तिः गुरोः महिमा चेति द्वयं कवीनां प्रबन्धॄणां वाचां विषयो वर्ण्यो बभूव ।

ನಿರಂತರ ಶೋಭಿಸುವ ಗುರುಗಳ ಮಹಿಮೆ ಹಾಗೂ ಶಿಷ್ಯನ ಭಕ್ತಿ ಈವೆರಡು ಮೂರುಕಾಲುಗಳಲ್ಲಿ ಮೂರುಲೋಕಗಳಲ್ಲಿ ಸಾಮ್ಯವಿಲ್ಲದವುಗಳು. ಇವುಗಳನ್ನು ಕವಿಗಳು ತಮ್ಮ ಪ್ರಬಂಧಗಳಿಂದ ವರ್ಣಿಸಿದರು.

**अशेषदेवैः समुपास्यमानो विशेषितोऽनन्तगुणैरदोषैः ।**
**प्रसीदताच्छ्रीदयितस्तवेति तदाऽऽशिषं तस्य सदस्यवक् सः ।।३४।।**

**अशेषेति** । तदा तस्मिन् समये स सत्यनिधिः अशेषैः समस्तैः देवैः समुपास्यमानो अशेषैः अनन्तगुणैः विशेषितः सञ्जातविशेषः श्रियोदयितः तव प्रसीदतात् इति सदसि तस्य अनन्तविभोः आशिषं अवक् अवोचत्। वक्तेर्लङ् ।

ಆಗ ಶ್ರೀಸತ್ಯನಿಧಿಗಳು "ಅಶೇಷ ದೇವತೆಗಳಿಂದ ಪೂಜಿತನಾದ, ಸಮಸ್ತಗುಣಗಳಿಂದ ವಿಶಿಷ್ಟನಾದ, ಶ್ರೀರಮಣನು ನಿನಗೆ ಅನುಗ್ರಹಿಸಲಿ", ಎಂದು ಸಭೆಯಲ್ಲಿ ಅನಂತಪ್ರಭುವಿಗೆ ಆಶೀರ್ವಚನಗಳನ್ನು ನೀಡಿದರು.

**नानादिगन्तागतवादिवृन्दे-**
**ष्वरुंतुदं संयमिपुङ्गवस्य ।**
**श्रुण्वत्सु वाक्यं विबुधस्तदानीं**
**कश्चित् गिरा प्रत्यवतिष्ठते स्म ।।३५।।**

**नानेति** । अरुंतुदं मर्मस्पृक् । "अरुन्तुदन्तु मर्मस्पृगि"त्यमरः । "विध्वरुषोः तुदः" इति खच् । अरुर्द्विषेति मुम् । संयमिपुङ्गवस्य सत्यनिधेः वाक्यं आशीर्वचं श्रुण्वत्सु नानादिगन्तेभ्यः आगतेषु वादिनां वृन्देषु मध्ये तदानीं कश्चिद्विबुधः मीमांसकः गिरा प्रत्यवतिष्ठते स्म प्रत्यवस्थानं कृतवान् ।

ಮರ್ಮಸ್ಪರ್ಶಿಯಾದ ಯತಿಶ್ರೇಷ್ಠರಾದ ಶ್ರೀಸತ್ಯನಿಧಿಗಳ ಈ ಆಶೀರ್ವಚನವನ್ನು ಕೇಳಿ, ನಾನಾದೇಶಗಳಿಂದ ಬಂದ ವಾದಿಗಳಲ್ಲಿ ಒಬ್ಬ ಮೀಮಾಂಸಕ ಪಂಡಿತನು ವಾಕ್ಯಾರ್ಥಕ್ಕೆಳಿದನು.

**न देवता विग्रहभागशब्दा नोपास्यतोपासकताप्यतोऽस्याः ।**
**सविग्रहानित्यतयार्थहीना श्रुतिर्न मानं परमन्यथा स्यात् ।।३६।।**

प्रत्यवस्थानप्रकारमाह । **नेति** । अशब्दा चतुर्थ्यन्तादिशब्दभिन्ना विग्रहं शरीरं भजतीति विग्रहभाक् देवता नास्ति । अतः अस्याः देवतायाः विष्णुरूपेण उपास्यता ब्रह्मादिरूपतया उपासकतापि नास्ति । अन्यथा देवतायाः विग्रहत्वाङ्गीकारे सविग्रहस्य अनित्यतया अर्थेन अभिधेयेन हीना श्रुतिः मानं परं प्रमाणमेव न स्यात् । तथा च श्रुत्य-

प्रामाण्यापत्या देवतायाः विग्रत्वाभावेन विष्णोः सर्वदेवोपास्यत्वमयुक्तमिति भावः ।

ಆ ಮೀಮಾಂಸಕ ವಾದಿಯು ಹೀಗೆ ಪೂರ್ವಪಕ್ಷವನ್ನು ಮಾಡಿದನು. "ಇಂದ್ರಾಯ" "ಅಗ್ನಯೇ" ಇತ್ಯಾದಿ ರೂಪವಾದ ಚತುರ್ಥೀವಿಭಕ್ತಿಯೇ ಕೊನೆಗಿರುವ ಪದಗಳನ್ನು ಹೊರತು ಪಡಿಸಿ ಬೇರೆ ದೇವತೆಗಳೇ ಇಲ್ಲ. ಈ ಪದಗಳನ್ನೇ ದೇವತೆಗಳೆಂದು ಒಪ್ಪಬೇಕೇ ಹೊರತು ದೇಹಧಾರಿಗಳಾದ ಬೇರೆ ದೇವತೆಗಳನ್ನು ಒಪ್ಪುವುದು ಸರಿಯಲ್ಲ. ಶರೀರವೇ ಇಲ್ಲದಿದ್ದಾಗ ವಿಷ್ಣುವು ಪೂಜ್ಯ, ಬ್ರಹ್ಮಾದಿ ದೇವತೆಗಳು ಪೂಜಕರು ಎಂಬುದು ಸರಿಯಲ್ಲ. ಒಂದು ವೇಳೆ ಬ್ರಹ್ಮಾದಿದೇವತೆಗಳಿಗೆ ಶರೀರವನ್ನು ಒಪ್ಪಿದರೆ, ಆ ಶರೀರಗಳೆಲ್ಲ ಪ್ರಳಯಕಾಲದಲ್ಲಿ ನಾಶಹೊಂದುವುದರಿಂದ ಅವುಗಳನ್ನು ಹೇಳಿದ ಬ್ರಹ್ಮ ಮುಂತಾದ ಪದಗಳಿಗೆ ಅರ್ಥವೇ ಉಳಿಯುವುದಿಲ್ಲ. ಆ ಪದಗಳು ಅರ್ಥಶೂನ್ಯವಾಗಬೇಕಾದೀತು. ಅದ್ದರಿಂದ ದೇಹಧಾರಿದೇವತೆಗಳೇ ಇಲ್ಲ. ಆಪದಗಳೇ ದೇವತೇಗಳು ಹೀಗೆ ಹೇಳಿದರೆ ವೇದವು ಪ್ರಮಾಣವಾಗುವುದು ಇಲ್ಲದಿದ್ದರೆ ವೇದ ಅಪ್ರಮಾಣ ಆಗಬೇಕಾದೀತು.

**स्यादत्र पश्वादिभिरप्यनित्यैः**
**श्रुत्यप्रमाणत्वमतः श्रुतीनाम् ।**
**सत्वात्तु सा मूर्तिमतीति भिक्षुः**
**वदन्यगृण्हात् प्रतिवादिनं सः ।।३८।।**

निग्रहप्रकारमाह । **स्यादिति** । अत्र अर्थस्य अनित्यतया श्रुत्यप्रामाण्यपक्षे । पशुना यजेतेत्यादिविहितैः अनित्यैः पश्वादिभिरपि श्रुत्यप्रमाणत्वं स्यात् । देवता इव द्रव्यस्यापि यागरूपत्वादिति भावः । अतः प्रवाहतो नित्यत्वेन श्रुतिप्रामाण्यसम्भवात् । विग्रहत्वे श्रुतीनां "सहस्रशीर्षापुरुषः" "वज्रहस्तः पुरन्दरः" । इत्यादीनां सत्वाच्च सा देवता मूर्तिमती विग्रहवती । अतः उपास्योपासकतायुक्तेति वदन् भिक्षुः सत्यनिधिः प्रतिवादिनं न्यगृण्हात् । निगृहीतवान् ।

ಮೀಮಾಂಸಕನ ಪೂರ್ವಪಕ್ಷವನ್ನು ಶ್ರೀಸತ್ಯನಿಧಿಗಳು ಈ ರೀತಿ ನಿರಾಕರಿಸಿದರು. ದ್ರವ್ಯ, ದೇವತಾ ಮತ್ತು ಮಂತ್ರ, ಇವು ಯಾಗದ ಸ್ವರೂಪ. ಇವುಗಳಲ್ಲಿ ದೇವತೆಗಳಿಗೆ ದೇಹವನ್ನು ಒಪ್ಪಿದರೆ, "ಆ ದೇಹ ನಶ್ವರವಾದದ್ದರಿಂದ ಶ್ರುತಿಯು ಅರ್ಥಶೂನ್ಯವಾಗಿ ಅಪ್ರಮಾಣವಾಗಬೇಕಾಗುತ್ತದೆ" ಎಂಬ

**अशेषदेवैः समुपास्यमानो विशेषितोऽनन्तगुणैरदोषैः ।**
**प्रसीदताच्छ्रीदयितस्तवेति तदाऽऽशिषं तस्य सदस्यवक् सः ।।३४।।**

**अशेषेति** । तदा तस्मिन् समये स सत्यनिधिः अशेषैः समस्तैः देवैः समुपास्यमानो अशेषैः अनन्तगुणैः विशेषितः सञ्जातविशेषः श्रियोदयितः तव प्रसीदतात् इति सदसि तस्य अनन्तविभोः आशिषं अवक् अवोचत्। वक्तेर्लङ् ।

ಆಗ ಶ್ರೀಸತ್ಯನಿಧಿಗಳು "ಅಶೇಷ ದೇವತೆಗಳಿಂದ ಪೂಜಿತನಾದ, ಸಮಸ್ತಗುಣಗಳಿಂದ ವಿಶಿಷ್ಟನಾದ, ಶ್ರೀರಮಣನು ನಿನಗೆ ಅನುಗ್ರಹಿಸಲಿ", ಎಂದು ಸಭೆಯಲ್ಲಿ ಅನಂತಪ್ರಭುವಿಗೆ ಆಶೀರ್ವಚನಗಳನ್ನು ನೀಡಿದರು.

**नानादिगन्तागतवादिवृन्दे-**
**ष्वरुंतुदं संयमिपुङ्गवस्य ।**
**श्रुण्वत्सु वाक्यं विबुधस्तदानीं**
**कश्चित् गिरा प्रत्यवतिष्ठते स्म ।।३५।।**

**नानेति** । अरुंतुदं मर्मस्पृक् । "अरुन्तुदन्तु मर्मस्पृगि"त्यमरः । "विध्वरुषोः तुदः" इति खच् । अरुर्द्विषेति मुम् । संयमिपुङ्गवस्य सत्यनिधेः वाक्यं आशीर्वचं श्रुण्वत्सु नानादिगन्तेभ्यः आगतेषु वादिनां वृन्देषु मध्ये तदानीं कश्चिद्विबुधः मीमांसकः गिरा प्रत्यवतिष्ठते स्म प्रत्यवस्थानं कृतवान् ।

ಮರ್ಮಸ್ಪರ್ಶಿಯಾದ ಯತಿಶ್ರೇಷ್ಠರಾದ ಶ್ರೀಸತ್ಯನಿಧಿಗಳ ಈ ಆಶೀರ್ವಚನವನ್ನು ಕೇಳಿ, ನಾನಾದೇಶಗಳಿಂದ ಬಂದ ವಾದಿಗಳಲ್ಲಿ ಒಬ್ಬ ಮೀಮಾಂಸಕ ಪಂಡಿತನು ವಾಕ್ಯಾರ್ಥಕ್ಕಿಳಿದನು.

**न देवता विग्रहभागशब्दा नोपास्यतोपासकताप्यतोऽस्याः ।**
**सविग्रहानित्यतयार्थहीना श्रुतिर्न मानं परमन्यथा स्यात् ।।३६।।**

प्रत्यवस्थानप्रकारमाह । **नेति** । अशब्दा चतुर्थ्यन्तादिशब्दभिन्ना विग्रहं शरीरं भजतीति विग्रहभाक् देवता नास्ति । अतः अस्याः देवतायाः विष्णुरूपेण उपास्यता ब्रह्मादिरूपतया उपासकतापि नास्ति । अन्यथा देवतायाः विग्रहत्वाङ्गीकारे सविग्रहस्य अनित्यतया अर्थेन अभिधेयेन हीना श्रुतिः मानं परं प्रमाणमेव न स्यात् । तथा च श्रुत्य-

प्रामाण्यापत्या देवतायाः विग्रत्वाभावेन विष्णोः सर्वदेवोपास्यत्वमयुक्तमिति भावः ।

ಆ ಮೀಮಾಂಸಕ ವಾದಿಯು ಹೀಗೆ ಪೂರ್ವಪಕ್ಷವನ್ನು ಮಾಡಿದನು. "ಇಂದ್ರಾಯ" "ಅಗ್ನಯೇ" ಇತ್ಯಾದಿ ರೂಪವಾದ ಚತುರ್ಥೀವಿಭಕ್ತಿಯೇ ಕೊನೆಗಿರುವ ಪದಗಳನ್ನು ಹೊರತು ಪಡಿಸಿ ಬೇರೆ ದೇವತೆಗಳೇ ಇಲ್ಲ. ಈ ಪದಗಳನ್ನೇ ದೇವತೆಗಳೆಂದು ಒಪ್ಪಬೇಕೇ ಹೊರತು ದೇಹಧಾರಿಗಳಾದ ಬೇರೆ ದೇವತೆಗಳನ್ನು ಒಪ್ಪುವುದು ಸರಿಯಲ್ಲ. ಶರೀರವೇ ಇಲ್ಲದಿದ್ದಾಗ ವಿಷ್ಣುವು ಪೂಜ್ಯ, ಬ್ರಹ್ಮಾದಿ ದೇವತೆಗಳು ಪೂಜಕರು ಎಂಬುದು ಸರಿಯಲ್ಲ. ಒಂದು ವೇಳೆ ಬ್ರಹ್ಮಾದಿದೇವತೆಗಳಿಗೆ ಶರೀರವನ್ನು ಒಪ್ಪಿದರೆ, ಆ ಶರೀರಗಳೆಲ್ಲ ಪ್ರಳಯಕಾಲದಲ್ಲಿ ನಾಶಹೊಂದುವುದರಿಂದ ಅವುಗಳನ್ನು ಹೇಳಿದ ಬ್ರಹ್ಮ ಮುಂತಾದ ಪದಗಳಿಗೆ ಅರ್ಥವೇ ಉಳಿಯುವುದಿಲ್ಲ. ಆ ಪದಗಳು ಅರ್ಥಶೂನ್ಯವಾಗಬೇಕಾದೀತು. ಅದ್ದರಿಂದ ದೇಹಧಾರಿದೇವತೆಗಳೇ ಇಲ್ಲ. ಆಪದಗಳೇ ದೇವತೇಗಳು ಹೀಗೆ ಹೇಳಿದರೆ ವೇದವು ಪ್ರಮಾಣವಾಗುವುದು ಇಲ್ಲದಿದ್ದರೆ ವೇದ ಅಪ್ರಮಾಣ ಆಗಬೇಕಾದೀತು.

**स्यादत्र पश्वादिभिरप्यनित्यैः**
**श्रुत्यप्रमाणत्वमतः श्रुतीनाम् ।**
**सत्वात्तु सा मूर्तिमतीति भिक्षुः**
**वदन्यगृण्हात् प्रतिवादिनं सः ।।३८।।**

निग्रहप्रकारमाह । **स्यादिति** । अत्र अर्थस्य अनित्यतया श्रुत्यप्रामाण्यपक्षे । पशुना यजेतेत्यादिविहितैः अनित्यैः पश्वादिभिरपि श्रुत्यप्रमाणत्वं स्यात् । देवता इव द्रव्यस्यापि यागरूपत्वादिति भावः । अतः प्रवाहतो नित्यत्वेन श्रुतिप्रामाण्यसम्भवात् । विग्रहत्वे श्रुतीनां "सहस्रशीर्षापुरुषः" "वज्रहस्तः पुरन्दरः" । इत्यादीनां सत्वाञ्च सा देवता मूर्तिमती विग्रहवती । अतः उपास्योपासकतायुक्तेति वदन् भिक्षुः सत्यनिधिः प्रतिवादिनं न्यगृण्हात् । निगृहीतवान् ।

ಮೀಮಾಂಸಕನ ಪೂರ್ವಪಕ್ಷವನ್ನು ಶ್ರೀಸತ್ಯನಿಧಿಗಳು ಈ ರೀತಿ ನಿರಾಕರಿಸಿದರು. ದ್ರವ್ಯ, ದೇವತಾ ಮತ್ತು ಮಂತ್ರ, ಇವು ಯಾಗದ ಸ್ವರೂಪ. ಇವುಗಳಲ್ಲಿ ದೇವತೆಗಳಿಗೆ ದೇಹವನ್ನು ಒಪ್ಪಿದರೆ, "ಆ ದೇಹ ನಶ್ವರವಾದದ್ದರಿಂದ ಶ್ರುತಿಯು ಅರ್ಥಶೂನ್ಯವಾಗಿ ಅಪ್ರಮಾಣವಾಗಬೇಕಾಗುತ್ತದೆ" ಎಂಬ

ಭಯದಿಂದ ದೇವತೆಗಳಿಗೆ ಶಬ್ದಸ್ವರೂಪತ್ವವನ್ನು ಹೇಳುವುದಾದರೆ, ಪಶು, ಪುರೋಡಾಶಗಳೂ ಅನಿತ್ಯವಾದದ್ದರಿಂದ "ಪಶುನಾ ಯಜೇತ" ಎಂಬ-ಲ್ಲಿಯೂ ಪಶುವಿಗೆ ಶಬ್ದಸ್ವರೂಪತ್ವವನ್ನೇ ಒಪ್ಪಬೇಕಾದೀತು. (ಪಶುಯಾಗ-ದಲ್ಲಿ ಪಶುಬಲಿಯನ್ನು ಕೊಡುವುದು ಅಶಾಸ್ತ್ರೀಯವೆಂದು ಆಗಬೇಕಾದೀತು. ಸ್ವಕ್ರಿಯಾ ವಿರೋಧವೂ ಬರುವುದು) ಆದಕ್ಕೆ ನೀನು ಪಶುಗಳು ಪ್ರವಾಹತಃ ನಿತ್ಯವಾದದ್ದರಿಂದ ವೇದಗಳಿಗೆ ಅಪ್ರಾಮಾಣ್ಯ ಭಯವಿಲ್ಲ ಎಂದರೆ, "ನಾವೂ ಹಾಗೆ ಹೇಳುತ್ತೇವೆ". ದೇವತೆಗಳು ಪ್ರವಾಹತಃ ನಿತ್ಯರಾದದ್ದರಿಂದ ವೇದಕ್ಕೆ ಅಪ್ರಾಮಾಣ್ಯ ಬರಲಾರದು ಎಂದು ಮತ್ತು "ಸಹಸ್ರಶೀರ್ಷಾ ಪುರುಷಃ," "ವಜ್ರಹಸ್ತಃ ಪುರಂದರಃ" ಸಾವಿರಾರು ತಲೆಗಳು ಉಳ್ಳವ ಪುರುಷನಾಮಕ ಹರಿ, ವಜ್ರವನ್ನು ಹಿಡಿದವ ಪುರಂದರ ಎಂಬ ಶ್ರುತಿಗಳೂ ಇರುವುದರಿಂದ ದೇವತೆಗಳಿಗೆ ದೇಹ ಇದ್ದೇ ಇದೆ. ಆದ್ದರಿಂದ ಹರಿಗೆ ಉಪಾಸ್ಯತ್ವ, ದೇವತೆಗ-ಳಿಗೆ ಉಪಾಸಕತ್ವ ಇವೆರಡೂ ಉಪಪನ್ನವಾಗುತ್ತವೆ.

**प्रसीदतादूपमिदं कथं स्यात्**
**तातङ् हि तुह्योरिति सूत्रसिद्धः ।**
**अन्त्यस्य चादेश उतः स ङित्वा-**
**दित्याक्षिपत्कश्चन शाब्दिकस्तम् ।।३८।।**

पुनः कस्यचित् आक्षेपप्रकारमाह । **प्रसीदतादिति** । इदं प्रसीदतात् इति रूपं कथं स्यादित्याक्षेपः तमेव विवृणोति । तातङ्हीति । हि यस्मात् कारणात् तातङ् "तुह्योस्तातङाशिष्यन्यतरस्यामिति" सूत्रेण सिद्धो विहितः स च तातङ् ङित्वात् ङिच्चेत्यनेन अन्त्यस्य उतः उका-रस्यादेशो भवति । अतः कथमित्याक्षेप इति कश्चन शाब्दिको वैय्याक-रणः तं सत्यनिधिं आक्षिपत् ।

ಶ್ರೀಸತ್ಯನಿಧಿಗಳು ಅನಂತಪ್ರಭುವನ್ನು ಆಶೀರ್ವಾದಮಾಡುವ ಶ್ಲೋಕದಲ್ಲಿ "ಪ್ರಸೀದತಾತ್ ಶ್ರೀದಯಿತಃ" ಎಂದು ನುಡಿದಿದ್ದಾರೆ. ಆ ವಾಕ್ಯದಲ್ಲಿ "ಪ್ರಸೀದತಾತ್" ಎಂಬ ರೂಪ ನಿಷ್ಪತ್ತಿಯ ಬಗ್ಗೆ ಒಬ್ಬ ವ್ಯಾಕರಣ ವಿದ್ವಾಂಸನು ಆಕ್ಷೇಪವನ್ನು ಮಾಡಿದನು.

ಆತನ ಆಕ್ಷೇಪ ಹೀಗಿದೆ. "ಪ್ರಸೀದತಾತ್" ಎಂಬ ರೂಪವು ಪ್ರ ಎಂಬ ಉಪಸರ್ಗ ಪೂರ್ವಕವಾದ ಷದ್ಲೃ ಧಾತುವಿನ ಮುಂದೆ ಇರುವ ತು ಪ್ರತ್ಯ-ಯಕ್ಕೆ "ತುಹ್ಯೋಸ್ತಾತಙ್ಙಶಿಷ್ಯನ್ಯತರಸ್ಯಾಂ" ಎಂಬ ಸೂತ್ರದಿಂದ "ತಾತಙ್"

ಆದೇಶವಾಗಿ ಪ್ರಸೀದತಾತ್ ಎಂಬ ರೂಪಸಿದ್ಧವಾಗಿದೆ. ಇಲ್ಲಿ "ತಾತಙ್" ಪ್ರತ್ಯಯದಲ್ಲಿ ಙಕಾರವು "ಇತ್" ಸಂಜ್ಞೆಯನ್ನು ಹೊಂದಿ ಲೋಪವಾಗುತ್ತದೆ. ಆದ್ದರಿಂದ "ಙಿಚ್ಚ" ಎಂಬ ಸೂತ್ರದಿಂದ ತಾತಙ್ ಆದೇಶವು ತು ಪ್ರತ್ಯಯದ ಉಕಾರಕ್ಕೆ ಮಾತ್ರ ಆದೇಶವಾಗಬೇಕೇ ಹೊರತು ಸರ್ವಾದೇಶ–ವಾಗುವಂತೆ ಇಲ್ಲ. (ಙಿತ್ ಆದದ್ದು ಆನೇಕಾಲ್ ಆದರು ಅಂತ್ಯಕ್ಕೆ ಮಾತ್ರ ಆದೇಶವಾಗಿ ಬರುತ್ತದೆ ಎಂದು ನಿಯಮ.) ಆದ್ದರಿಂದ ಪ್ರ + ಸೀದ ತ್ ತಾತಙ್ ಎಂದು ರೂಪನಿಷ್ಪತ್ತಿಯಾಗಬೇಕೇ ಹೊರತು ಪ್ರಸೀದತಾತ್ ಎಂದು ರೂಪಸರಿಯಲ್ಲ ಎಂದು

**ङित्संक्रमार्थं कृत एव नान्त्यादेशाय तत्सूच्यत एव सूत्रे ।**
**प्रसीदताद्रूपमनोहि युक्तमिति प्रजल्पन् तमखण्डयत्सः ।।३९।।**

खण्डनप्रकारमाह । **ङिदिति** । तातङि ङित् संक्रमार्थं क्क्तिचेति गुणवृद्धिप्रतिषेधार्थमेव कृतः अन्त्यादेशाय न तत् अन्त्यादेशार्थं न भवतीत्येतत् सूत्र एव सूच्यते । तदुक्तम् । "[1]तातङि ङित्वं संक्रमकृत् स्यात् अन्त्यविधिश्चेत्तच्च तथा न । हेरधिकारे हेरधिकारो लोपविधौतु ज्ञापकमाहे"ति प्रसीदतात् इति रूपं युक्तं हि । इति प्रजल्पन् वदन् सत्यनिधिः शाब्दिकमखण्डयत् खण्डितवान् ।

ಅದಕ್ಕೆ ಶ್ರೀಸತ್ಯನಿಧಿಗಳು "ಆದೇಶದಲ್ಲಿ" ಬರುವ "ಇತ್" ಸಂಜ್ಞ ಹೊಂದಿದ ಙಕಾರವು ಅಂತ್ಯಾದೇಶವನ್ನು ಹೇಳುವುದಾದರೂ ಇಲ್ಲಿ ಇತ್ ಸಂಜ್ಞೆ ಹೊಂದಿದ ಙಕಾರವು ಅಂತ್ಯಾದೇಶದ ಅಭಿಪ್ರಾಯದಿಂದ ಇಟ್ಟದ್ದಲ್ಲ. ಇಲ್ಲಿ ಙಕಾರವು "ಸಂಕ್ರಮಾರ್ಥಂ 'ಕ್ಙಿತಿಚ' ಇತಿ ಗುಣವೃದ್ಧಿ ಪ್ರತಿಷೇಧಾರ್ಥಂ" ಗುಣವೃದ್ಧಿಗಳ ಪ್ರತಿಷೇಧಕ್ಕಾಗಿ ಇಡಲ್ಪಟ್ಟಿದೆ. ಅದ್ದರಿಂದ ತಾತಙ್ ಇದು ಸರ್ವಾದೇಶವಾಗುತ್ತದೇ ಹೊರತಾಗಿ ಅಂತ್ಯಾದೇಶವಾಗುವುದಿಲ್ಲ ಇದನ್ನು ಸೂತ್ರದಲ್ಲಿ ಸೂಚಿಸಿದ್ದಾರೆ ಎಂದು ನಿರಾಕರಿಸಿದರು.

१. अयं श्लोकः काशिकायां उदाहृतः । पदमञ्जर्यामेवं व्याख्यातः । **तातङि** व्यवस्थितं ङित्वं **संक्रमकृत्स्यात्** - गुणवृद्धिप्रतिषेधकृद्भवति । **अन्त्यविधिश्चेत्** - ङित्करणात् अन्त्यादेशोपि ज्ञायते इतिचेत् **तच्च तथा न** - तत् ङित्वं तथा सति न च - नैव कर्तव्यं **लोपविधौ तु** - "अतो हेः"(६.४.१०५)इति लोपविधायकसूत्रे **हेरधिकारे** - "हुझल्भ्यो हेर्धिः"(६.४.१०४)इत्यनेन सूत्रेण हेरधिकारे सति पुनः **हेरधिकारो ज्ञापकं** सूत्रकारः **आह** इति । भाष्ये तु **ङित्वस्य सावकाशत्वात् विप्रतिषेधात् तातङ् सर्वादेशः** इत्युक्तं । ब्रूतात्, मृष्टात् इत्यादौ गुणवृद्धिप्रतिषेधाद्यर्थं अत्र ङित्करणात् सावकाशः अयं अपवादोपि उत्सर्गेण बाध्यते ।

**सङ्ख्यादिभिः पञ्चभिरीश्वरो हि**
**संवित्कृतीच्छाभिरपि प्रसिद्धः ।**
**अतः स दृष्टाष्टगुणोऽप्यनन्तगुणः**
**कथं स्यादिति कोप्यरौत्सीत् ।।४०।।**

अथ नैय्यायिकस्य प्रत्यवस्थानप्रकारमाह । **सङ्ख्येति** । हि यस्मात् कारणात् ईश्वरः सङ्ख्यादिभिः सङ्ख्यापरिमाणपृथक्त्वसंयोगविभागैः द्रव्यमात्रसाधारणपञ्चभिः गुणैः, संवित्कृतीच्छाभिः ज्ञानप्रयत्नेच्छाभिः जगत्कर्तृत्वेन सिद्धाभिः अपि एवं अष्टभिर्गुणैः प्रसिद्धः प्रकर्षेण साधितः। अतः दृष्टाः अष्टगुणाः यस्य स तथोक्तोऽपि स ईश्वरः कथमनन्तगुणः स्यात् इति नैय्यायिकः अरौत्सीत् । आक्षिप्तवानित्यर्थः ।

ಶ್ರೀಸತ್ಯನಿಧಿಗಳು ಭಗವಂತನನ್ನು ಅನಂತಗುಣನೆಂದು ಹೇಳಿದ್ದರು. (ವಿ-ಶೇಷತೋಽನಂತಗುಣಃ) ಇದಕ್ಕೆ ನೈಯ್ಯಾಯಿಕನು ಈಶ್ವರನು ದ್ರವ್ಯನಾಗಿದ್ದಾನೆ ಆದ್ದರಿಂದ ಅವನಲ್ಲಿ, ಎಲ್ಲ ದ್ರವ್ಯಗಳಲ್ಲಿ ಇರಬೇಕಾದ ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗವೆಂಬ ೫ ಗುಣಗಳು, ಮತ್ತು ಆತನು ವಿಶ್ವಕರ್ತೃವಾಗಿದ್ದಾನೆ. ಆದ್ದರಿಂದ ಕರ್ತೃವಿನಲ್ಲಿ ಇರಬೇಕಾದ ಜ್ಞಾನ, ಇಚ್ಛಾ, ಪ್ರಯತ್ನವೆಂಬ ಮೂರು ಗುಣಗಳು. ಹೀಗೆ ಒಟ್ಟು ಎಂಟು ಗುಣಗಳನ್ನು ಮಾತ್ರ ಒಪ್ಪಬೇಕೆ ಹೊರತು ಅನಂತಗುಣಗಳನ್ನು ಹೇಳುವುದು ಸರಿಯಲ್ಲ? ಎಂದು ವಾದಿಸಿದನು.

**श्रुत्योच्यते सोऽष्टगुणोऽथ युक्त्या**
**नाद्यस्तथा श्रुत्युपलब्ध्यभावात् ।**
**नान्त्योऽप्रमाणत्वत एव युक्ते-**
**रित्यभ्यभूत्तं कथयन् स भिक्षुः ।।४१।।**

खण्डनप्रकारमाह । **श्रुत्येति** । यः ईश्वरः अष्टगुण इति श्रुत्योच्यते अथवा युक्त्या उच्यते इति विकल्पः । तत्राद्यः पक्षो न । तत्र हेतुमाह। **तथेति** । तथा श्रुतेः अष्टगुणत्वप्रतिपादकश्रुतेः उपलब्ध्यभावात् । युक्तेः केवलानुमानस्य अप्रमाणत्वेन एवं अन्त्यः पक्षो न । अतः "बृहन्तो ह्यस्मिन् गुणा" इति श्रुतेः युक्तमनन्तगुणत्वमिति कथयन् सभिक्षुः सत्य-निधिः तं नैय्यायिकं अभ्यभूत् पराजितवान् ।

ಆ ನೈಯ್ಯಾಯಿಕನ ವಾದವನ್ನು ಗುರುಗಳು ಈ ರೀತಿ ನಿರಾಕರಿಸಿದರು. ಭಗವಂತನು ಅಷ್ಟಗುಣನೆಂದು ಶ್ರುತಿ ಹೇಳುತ್ತಿದೆಯೋ? ಅಥವಾ ಯುಕ್ತಿಗಳು ಹೇಳುತ್ತಿವೆಯೋ? ಶ್ರುತಿಯಲ್ಲಿ ಅಷ್ಟಗುಣನೆಂಬವುದು ಹೇಳಿಲ್ಲ. ಯುಕ್ತಿಯಾದರೂ ವೇದಗಳ ಬೆಂಬಲವಿಲ್ಲದೇ ಇದ್ದರೆ ದುರ್ಬಲ,ಅಪ್ರಮಾಣ. "ಬೃಹಂತೊಹ್ಯಸ್ಮಿನ್ ಗುಣಾ" ಎಂಬ ಶ್ರುತಿ ಇರುವುದರಿಂದ ಭಗವಂತನು ಅನಂತಗುಣನೇ ಸರಿ. ಇದರ ಮೇಲೆ ನೈಯ್ಯಾಯಿಕನು ಹೀಗೆ ಹೇಳುವನು. ಭಗವಂತನು "ಅಷ್ಟಗುಣ" ಎಂಬ ಸ್ಮೃತಿ ಇದೆ. ಆ ಸ್ಮೃತಿ ಬೆಂಬಲಿತವಾದ ಯುಕ್ತಿಯಿಂದ ಅಷ್ಟಗುಣನೆಂದು ಸಿದ್ಧವಾಗುತ್ತದೆ ಎಂದರೆ ಅದೂ ಸರಿಯಲ್ಲ. ಅದೇ ಭಾಗವತದಲ್ಲಿಯೇ "ಮಯ್ಯನಂತಗುಣೇऽನಂತ ಗುಣತೋನಂತ ವಿಗ್ರಹೇ" ಎಂದು ಹೇಳಿದ್ದರಿಂದ ಭಗವಂತ ಅನಂತಗುಣನೇ ಸರಿ.

**वेदान्तविद्याविदितो य आत्मा**
**स श्रूयते निर्गुण एव भूयः ।**
**अतो गुणोऽस्मिन् परमार्थभूतो**
**नास्तीति कश्चित् विदधे विवादम् ।।४२।।**

ततो मायावादिनः प्रत्यवस्थानमाह **वेदान्तेति** । वेदान्तरूपविद्यया विदितः य आत्मा सः भूयः पुनः पुनः निर्गुण एव श्रूयते अतः श्रुतेः प्रमाणत्वात् अस्मिन् आत्मनि यद्यपि गुणः प्रतीयते तथापि परमार्थभूतो गुणो नास्तीति कश्चित् मायावादी विवादं विदधे ।

ಮುಂದೆ ಮಾಯಾವಾದಿಯು ಈ ರೀತಿ ಪೂರ್ವಪಕ್ಷಿಸುತ್ತಾನೆ. ಭಗವಂತನನ್ನು ನಿರ್ಗುಣನೆಂದು "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಇತ್ಯಾದಿ ಅನೇಕವೇದವಚನಗಳು ಹೇಳುತ್ತಿವೆ. ಆದ್ದರಿಂದ ಆತ್ಮನಲ್ಲಿ ಗುಣವಿದೆ ಎಂದು ಹೇಳಿದರೂ ಅದು ಪರಮಾರ್ಥವಲ್ಲ. ಅವಿದ್ಯಕ ಗುಣಗಳಿವೆ ಎಂದು.

**न सत्यकामादिगुणानशेषान् श्रुतिर्निषेधेत् विहितांस्तथा चेत् ।**
**हिंसामहिंसावचनं निषेधेत् इति ब्रुवन् सोमुमपाचकार ।।४३।।**

तन्निराकरणप्रकारमाह । **नेति** । श्रुतिः निर्गुणश्रुतिः विहितान् स्वविहितान् अशेषान् सत्यकामादिगुणान् सत्यकामः सत्यसङ्कल्प इत्यादि श्रुतिसिद्धान् इत्यर्थः । न निषेधेत् निषेद्धुं न शक्नुयात् विहितस्य निषेधायोगात् इति भावः । तथाचेत् स्वविहितमपि निषेधेत् चेत् "नहिंस्यात् सर्वाभूतानि" इत्यहिंसा वचनं "अग्नीषोमीयं पशुमालभेत" इति हिंसामपि

ಉಡುಪೀ ಕ್ಷೇತ್ರದಲ್ಲಿ ಪಾರಿವ್ರಾಜ್ಯವೆಂಬ ಸಾಮ್ರಾಜ್ಯ ಸಂಪತ್ತುಳ್ಳ ಎಂಟು ಮಂದಿ ಯತಿಗಳಿಂದ, ದಿಗ್ವಿಜಯಿಯಾದ ಚಕ್ರವರ್ತಿಗಳು ಮಂಡಲಾಧಿಪತಿ-ಗಳಿಂದ ಬಹುಮಾನಿತರಾಗುವಂತೆ ಶ್ರೀಗಳು ಬಹುಮಾನಿತರಾದರು.

**दिग्जयलिलासंभृतजयपत्रैरेव नूतनैः पत्रैः ।**
**श्रीसत्यनाथयतिगुरुरगमत्संपूज्य कृष्णमथ कृष्णाम् ।।५५।।**

**दिगिति** । अथ सत्यनाथयतेः गुरुः सत्यनिधिः दिग्विजयलीलया संभृतैः संपादितैः जयपत्रैरेव नूतनैः अपूर्वैः पत्रैः पूजासाधनैः कृष्णं संपूज्य कृष्णां नदीं अगमत् ।

ಶ್ರೀಸತ್ಯನಾಥಯತಿಗಳ ಗುರುಗಳಾದ ಶ್ರೀಸತ್ಯನಿಧಿತೀರ್ಥರು ದಿಗ್ವಿಜಯಲೀಲೆಯಿಂದ ಸಂಪಾದಿತವಾದ ಜಯಪತ್ರಗಳೆಂಬ ನೂತನವಾದ ಪೂಜಾಸಾಧನಗಳಿಂದ ಕೃಷ್ಣನನ್ನು ಅರ್ಚಿಸಿ ಕೃಷ್ಣಾನದಿಯನ್ನು ಕುರಿತು ಹೊರಟರು.

**इति सकलकलाप्रवीणवाणी**
**विभवनिरस्तसमस्तमायिसङ्घः ।**
**प्रणयिनि कृतमानसः सलक्ष्म्याः**
**व्यजयत सत्यनिधिर्गुरुर्जगत्याम् ।।५६ ।।**

**इतीति** । सकलकलासु प्रवीणायाः वाण्याः विभवेन प्रभावेन निरस्तः समस्तमायिनां सङ्घः येन स तथोक्तः । लक्ष्म्याः प्रणयिनि श्रीकान्ते कृतं मानसं येन स सत्यनिधिगुरुः जगत्यां इति पूर्वोक्तप्रकारेण व्यजयत विशेषेणोत्कृष्टोऽभूत् । विपराभ्यं जेरित्यात्मने पदम् ।

ಈ ರೀತಿ ಸಕಲಕಲಾಪ್ರವೀಣವಾದ ವಾಣಿಯ ಪ್ರಭಾವದಿಂದ ಎಲ್ಲ ಮಾಯಾವಾದಿವಿದ್ವಾಂಸರ ಸಂಘವನ್ನು ನಿರಾಕರಿಸಿ ಲಕ್ಷ್ಮೀಪ್ರಿಯನಲ್ಲಿ ಮನಸ್ಸನ್ನು ಇಟ್ಟ ಶ್ರೀಸತ್ಯನಿಧಿಗಳು ಜಗತ್ತಿನಲ್ಲಿ ಅತ್ಯಂತ ಉತ್ಕೃಷ್ಟರಾದರು.

**सद्विद्यागुरुसत्यनाथयतिराट्श्रीपादसंसेवन**
**प्रोद्यत् पण्डितराजशब्दविरुदो यः श्रीनिवासः कविः ।**
**तस्य श्रीरघुनाथकीर्तनसुधास्वादैकवृत्तेः कृतौ**
**काव्ये सत्यनिधीयचारुचरिते सर्गोऽभवद्ध्यष्टमः ।।५७।।**

**सद्विद्येत्यादि** । व्याख्यातमेतत् ।

**श्री सत्यनाथतीर्थश्रीचरणचरणाराधक-**
**लक्ष्मीश्वरनरसिंहकृतायां सत्यनिधिविलासटीकायां**
**सर्वतोविसाख्यायां अष्टमः सर्गः ।।८।।**

ಚತುರ್ದಶವಿದ್ಯೆಗಳ ಗುರುಗಳಾದ ಶ್ರೀಸತ್ಯನಾಥಯತಿರಾಜರ ಕಾಂತಿಯುತ ಪಾದಗಳಸೇವನದಿಂದ ಪಂಡಿತರಾಜನೆಂಬ ಬಿರುದು ಭೂಷಿತನಾದ, ರಾಮಚಂದ್ರನ ಗುಣವರ್ಣನಸುಧಾಸ್ವಾದನದಲ್ಲಿ ಆಸಕ್ತನಾದ ಶ್ರೀನಿವಾಸಕವಿಯ ಶ್ರೀಸತ್ಯನಿಧಿವಿಲಾಸ ಕಾವ್ಯದಲ್ಲಿ **ಎಂಟನೇ ಸರ್ಗವು** ಮುಕ್ತಾಯಗೊಂಡಿದೆ.

**।। श्रीकृष्णार्पणमस्तु ।।**

---

## ಶ್ರೀಸತ್ಯನಿಧಿಗಳು (ಕ್ರಿ.ಶ.1638-1660)

ಭಕ್ತರಿಗೆ ಸಕಲಾಭೀಷ್ಟಗಳನ್ನೀಯುತ್ತಾ ಪಾರಿಜಾತರೆನಿಸಿದ, ಅರಿಷಡ್ವರ್ಗವನ್ನು ದೂರ ಅಟ್ಟುವ ಮೂಲಕ ಅಪಾರಿಜಾತರಾದ ಶ್ರೀಸತ್ಯನಿಧಿತೀರ್ಥರು ಶ್ರೀಮದುತ್ತರಾದಿಮಠದ ೧೮ನೇ ಪೀಠಾಧಿಪತಿಗಳು. ಜ್ಞಾನಮೇರುಗಳು, ಕೃಪಾಸಾಗರರು, ಮಹಾವೈರಾಗ್ಯನಿಧಿಗಳು. ಕೌಲಗೀ ವಂಶದಲ್ಲಿ ಅವತರಿಸಿ ರಘುನಾಥಾಚಾರ್ಯರೆಂದು ವಿಖ್ಯಾತರಾಗಿ, ಸಕಲಶಾಸ್ತ್ರಪಾರಂಗತರಾಗಿ ಉತ್ತರ ದಿಗ್ವಿಜಕ್ಕೆಂದು ಕಾಶೀಯಾತ್ರೆಯನ್ನು ಕೈಗೊಂಡ ಮೇಧಾವಿಮೂರ್ಧನ್ಯರು.

**ಯಾರಿಗ ಉತ್ತರಾಧಿಕಾರ?**

ಶ್ರೀವೇದನಿಧಿಗಳ ವೃದ್ಧಾಪ್ಯ. ತಮ್ಮ ಕಡೆಯದಿನಗಳಲ್ಲಿ ಸದಾ ಸಮಾಧ್ಯವಸ್ಥೆ-ಯಲ್ಲಿಯೇ ಇರುವವರು. ಶ್ರೀಮಠದ ಅಧಿಕಾರಿವರ್ಗವೆಲ್ಲ ಬಂದು ದಂಡ ಪ್ರಣಾದೊಂದಿಗೆ, ಸ್ವಾಮಿ! ಉತ್ತರಾಧಿಕಾರಿಗಳನ್ನು ತಾವು ಸೂಚಿಸಬೇಕು. ಶ್ರೀವೇದವ್ಯಾಸತೀರ್ಥರಿಂದ ಆಶ್ರಮಸ್ವೀಕರಿಸಿದ ಶ್ರೀಕೃಷ್ಣದ್ವೈಪಾಯನತೀರ್ಥರಿ-ದ್ದಾರೆ. ತಮ್ಮಿಂದ ಆಶ್ರಮಸ್ವೀಕರಿಸಿದ ಶ್ರೀಸತ್ಯವ್ರತರಿದ್ದಾರೆ, ಶ್ರೀಸತ್ಯಾನಂದತೀ-ರ್ಥರಿದ್ದಾರೆ. ಶ್ರೀಕೃಷ್ಣದ್ವೈಪಾಯನರಿಂದ ಆಶ್ರಮಪಡೆದು ತಮ್ಮಿಂದ ದಂಡವ್ಯತ್ಯಾಸ ಹೊಂದಿದ ಪ್ರಿಯಶಿಷ್ಯರಾದ ಶ್ರೀರಂಗನಾಥತೀರ್ಥರಿದ್ದಾರೆ. ಇವರಲ್ಲಿ ಯಾರಿಗೆ ಉತ್ತರಾಧಿಕಾರ?! ಎಲ್ಲರೂ ಮಹಾ ತಪಸ್ವಿಗಳೇ, ಜ್ಞಾನಿವರೇಣ್ಯರೇ ಆಗಿದ್ದಾರೆ. ಇದರಲ್ಲಿ ಸಂದೇಹವಿಲ್ಲ. ಎಂದು ಪ್ರಾರ್ಥಿಸಿದರು. ಧ್ಯಾನದಿಂದ ಕಣ್ತೆರೆದ ಶ್ರೀಗಳು, "ನಮ್ಮ ಗುರುಗಳಾದ ಶ್ರೀವಿದ್ಯಾಧೀಶರ ಅನುಗ್ರಹದಿಂದ ಜನ್ಮತಾಳಿದ ಪಂಡಿತೋತ್ತಮರಾದ ಕೌಲಗೀ ರಘುನಾಥಾಚಾರ್ಯರು ಮುಂದೆ ಈಪೀಠವನ್ನು ಅಲಂಕರಿಸುವರು. ಅವರು ಕಾಶಿಯ ಪಂಡಿತರನ್ನು ವಾಕ್ಯಾರ್ಥದಲ್ಲಿ ಗೆದ್ದು, ವೈಷ್ಣವ ಪತಾಕೆಯನ್ನು ಹಾರಿಸಲು, ಉತ್ತರಕ್ಕೆ ಪ್ರಯಾಣಬೆಳಿಸಿದ್ದಾರೆ. ಆದ್ದರಿಂದ ಸಾಂಗಲಿಯಲ್ಲಿ ಪಾಠಪ್ರವಚನ ಮಾಡುತ್ತಿರುವ ಶ್ರೀಸತ್ಯವ್ರತರೇ ಈಗ ಉತ್ತರಾಧಿಕಾರಿಗಳು. ಮುಂದೆ ಅವರಿಗೆ ಶಿಷ್ಯರಾಗಿ ಉತ್ತರಾಧಿಕಾರವನ್ನು ರಘುನಾಥಾಚಾರ್ಯರು ಸ್ವೀಕರಿಸಿ ಶ್ರೀಸತ್ಯನಿಧಿಗಳೆಂದು ಪ್ರಖ್ಯಾತರಾಗುತ್ತಾರೆ ಎಂದು ನುಡಿದು ಹರಿಧ್ಯಾನ ಪರರಾದರು.

**ಶ್ರೀಸತ್ಯವ್ರತತೀರ್ಥರು.................**

ಮಹಾಸಂಸ್ಥಾನವನ್ನು ಸ್ವೀಕರಿಸಿದ ಶ್ರೀಸತ್ಯವ್ರತರು ಪರವಾದಿ ನಿಗ್ರಹಪೂ-ರ್ವಕ ತತ್ವವಾದವನ್ನು ಪ್ರಚಾರಮಾಡುತ್ತಾ, ಶ್ರೀಮನ್ನ್ಯಾಯಸುಧಾಗ್ರಂಥಕ್ಕೆ

ಟಿಪ್ಪಣಿ ಬರೆದು ರಘುನಾಥರಿಗಾಗಿ ಕಾಯುತ್ತಿದ್ದಾರೆ. ಮೊದಲು ಶ್ರೀಸತ್ಯಪ್ರಜ್ಞರಿಗೆ ಅಣುಸಂಸ್ಥಾನವನ್ನಿತ್ತಿದ್ದರು. ಅವರು ಸ್ವಲ್ಪಕಾಲದಲ್ಲಿಯೇ ವೃಂದಾವನಸ್ಥರಾದರು. ಶ್ರೀಸತ್ಯವ್ರತರು ರಘುನಾಥಾಚಾರ್ಯರನ್ನು ಕಾಯುತ್ತಿರುವಾಗ ಅವರ ಊರಿನವರೇ ಆದ ಅಚ್ಯುತಾಚಾರ್ಯರು ಬಂದು ರಘುನಾಥಾಚಾರ್ಯರಬಗ್ಗೆ ಎಲ್ಲವನ್ನು ನಿವೇದಿಸಿ, ಅವರು ನಾಳಿನದಿನವೇ ತಮ್ಮ ಅಶೇಷ ಜಯ ಪತ್ರಗಳೊಂದಿಗೆ ಶಿಷ್ಯರೊಂದಿಗೆ ಬಂದು ಗುರುಗಳ ಪಾದಕ್ಕೆರಗುವರೆಂದು ವಿರಮಿಸಿದರು.

ಶ್ರೀರಘುನಾಥಾಚಾರ್ಯರು ಮರುದಿನವೇ ತಮ್ಮ ನೂರುಜನ ಶಿಷ್ಯರೊಂದಿಗೆ ಸಾಷ್ಟಾಂಗ ಪ್ರಣಾಮಮಾಡಿ, ಎಲ್ಲ ಜಯಪತ್ರಗಳನ್ನು ಗುರುಗಳ ಪಾದಾರವಿಂದಗಳಲ್ಲಿ ಸಮರ್ಪಿಸಿದರು.

**ಜ್ಞಾನಿಗಳ ನುಡಿ ಹುಸಿಯಾಗದು .................**

ರಘುನಾಥಾಚಾರ್ಯರ ತಂದೆ ಪುರುಷೋತ್ತಮಾಚಾರ್ಯರು, ಅವರಿಗೆ ಸಂತಾನವಿಲ್ಲದಿರುವಾಗ ಶ್ರೀವಿದ್ಯಾಧೀಶರು ಸ್ವಪ್ನದಲ್ಲಿ ಬಂದು "ನಿಮಗೆ ಒಬ್ಬ ಸುಪುತ್ರ ಹುಟ್ಟುತ್ತಾನೆ. ಆತನು ರಾಮದೇವರ ಅನುಗ್ರಹದಿಂದ ಮಹಾವಿದ್ವಾಂಸನಾಗಿ ನಮ್ಮ ಪೀಠವನ್ನೇರುತ್ತಾನೆ" ಎಂದು ಅನುಗ್ರಹಿಸಿದ್ದರು. ಅದರಂತೆ ಪುತ್ರೋತ್ಪತ್ತಿಯಾಗಿ, ರಘುನಾಥನೆಂಬ ನಾಮಕರಣವೂ ಆಯಿತು. ಶ್ರೀರಘುನಾಥಾಚಾರ್ಯರು ಮಹಾವಿದ್ವಾಂಸರಾಗಿ ಗೃಹಸ್ಥಾಶ್ರಮ ಸ್ವೀಕರಿಸಿ, ಸದಾ ಯಜ್ಞ, ಯಾಗ, ಪಾಠ, ಪ್ರವಚನ, ಪರವಾದಿನಿಗ್ರಹಗಳಲ್ಲೇ ದೀಕ್ಷಾಬದ್ಧರಾಗಿದ್ದರು. ಶಿಷ್ಯ ಸಮೇತರಾಗಿ ಉತ್ತರದಿಗ್ವಿಜಯಕ್ಕೆ ಹೊರಟು ನಿಂತರು. ಪುರುಷೋತ್ತಮಾಚಾರ್ಯರಿಗೆ ಮತ್ತೆ ಆರಂಭವಾಯಿತು ಸಂತಾನದ ಚಿಂತೆ, ಆದರೆ ಮೌನದ ಹೊರತಾಗಿ ಇನ್ನಾವ ಉಪಾಯವೂ ಅವರಿಗೆ ಉಳಿಯಲಿಲ್ಲ. ವೈರಾಗ್ಯ ಪರ್ವತರಾದ ರಘುನಾಥಾಚಾರ್ಯರು, ಕೃಪಾಸಾಗರರೂ ಹೌದು. ಎಲ್ಲರ ಮನಸ್ಸೂ ಅವರಿಗೆ ಪ್ರತ್ಯಕ್ಷವೇ ಆದ್ದರಿಂದ ಪರಿಹಾರವೂ ಅವರ ಕಣ್ಣಮುಂದೇ ಕುಣಿಯುತ್ತಿತ್ತು. ಅವರು ತಂದೆಗಳ ಬಳಿ ಬಂದು ಶ್ರೀಮದಾಚಾರ್ಯರನ್ನು ಸ್ಮರಿಸುತ್ತಾ, ನಿಮಗೆ ಇನ್ನೂ ಇಬ್ಬರು ಮಕ್ಕಳಾಗುತ್ತಾರೆ. (ವ್ಯಾಸಾಚಾರ್ಯರು ನರಸಿಂಹಾಚಾರ್ಯರು) ಅವರಿಂದ ವಂಶದ ಬೆಳವಣಿಗೆ ಎಂಬ ಭವಿಷ್ಯನುಡಿಯಿಂದ ಸಾಂತ್ವನಗೊಳಿಸಿ, ದಿಗ್ವಿಜಯಕ್ಕೆ ಅನುಮತಿ ಪಡೆದು, ಯಾತ್ರೆಪೂರ್ಣಗೊಳಿಸಿದರು.

ಗುರುಗಳಿತ್ತ ವಚನ ಸತ್ಯವಾಯಿತು "ಲೋಕೋತ್ತರಾಣಾಂ ವಚನಾನಿ ಲೋಕೇ ನಾರ್ಥೇನ ದೃಷ್ಟಾನಿ ವಿನಾಕೃತಾನಿ" ಪುರುಷೋತ್ತಮಾಚಾರ್ಯರು ವಿದ್ಯಾಧೀಶರ ಅನುಗ್ರಹದಿಂದ ಜೇಷ್ಠ ಶ್ರೇಷ್ಠ ಪುತ್ರರನ್ನು ಪಡೆದರೆ, ರಘುನಾಥಾಚಾರ್ಯರ

ವರನುಡಿಯಂತೆ, ಮತ್ತೆ ಶ್ರೇಷ್ಠರಾದ ಇಬ್ಬರು ಮಕ್ಕಳನ್ನು ಪಡೆದರು. ಉತ್ತಮರ ವಚನ ಹುಸಿಯಲ್ಲ ಎಂಬುದಕ್ಕೆ ಇದು ಎರಡನೇ ದೃಷ್ಟಾಂತ. ಶ್ರೀರಘುನಾಥಾ-ಚಾರ್ಯರು ಆಶ್ರಮಸ್ವೀಕರಿಸಿ, ಶ್ರೀಸತ್ಯನಿಧಿಗಳೆಂದು ವಿಖ್ಯಾತರಾದಾಗ, ಶ್ರೀವೇದನಿಧಿಗಳ, ಶ್ರೀವಿದ್ಯಾಧೀಶತೀರ್ಥರ ವಚನಗಳು ಸತ್ಯವಾಗಿ ಮತ್ತೆ ಉತ್ತಮರವಚನ ಹುಸಿಯಲ್ಲ ಎಂಬುದು ಮೂರನೇ ದೃಷ್ಟಂತವನ್ನು ಪಡೆದುಕೊಂಡಿತು.

ರಘುನಾಥಾಚಾರ್ಯರು (ಶ್ರೀಸತ್ಯನಿಧಿಗಳು) ಭಾಗಾನಗರ (ಮಹಾರಾಷ್ಟ್ರ-ದಲ್ಲಿದೆ.)ದಲ್ಲಿ ಶ್ರೀಸತ್ಯವ್ರತರ ಅನುಗ್ರಹದಿಂದ ಆಶ್ರಮಸ್ವೀಕರಿಸಿ, ಅಣುಸಂಸ್ಥಾನ ಪಡೆದು, ಸತ್ಯನಿಧಿಗಳೆನಿಸಿದರು. ಶ್ರೀಗಳು ಪ್ರಾರಂಭದಲ್ಲಿ ವಂಶರಾಮದೇವರನ್ನು ತೃತೀಯವ್ಯಾಸಮುಷ್ಟಿಕೆಯನ್ನು ಪೂಜಿಸುತ್ತಾ, ಎಲ್ಲೆಡೆ ದಿಗ್ವಿಜಯ ಮಾಡಿದರು. ಶ್ರೀಸತ್ಯವ್ರತರು ಬಹುಧಾನ್ಯ ಸಂವತ್ಸರ ಪಾಲ್ಗುಣ ಶುದ್ಧ ಷಷ್ಠೀಯಂದು ವೇದಾಂತಸಾಮ್ರಾಜ್ಯ ಮಹಾಸಿಂಹಾಸನದಲ್ಲಿ ಶ್ರೀಸತ್ಯನಿಧಿಗಳಿಗೆ ಪಟ್ಟಾಭಿಷೇಕ ಮಾಡಿ, ಹರಿಧ್ಯಾನ ಪರರಾದರು. ಶ್ರೀಸತ್ಯನಿಧಿತೀರ್ಥರು, ಮೊದಲು ವೇದನಿಧಿ-ತೀರ್ಥರಿಂದ ಆಶ್ರಮಸ್ವೀಕರಿಸಿದ ಶ್ರೀಸತ್ಯಾನಂದತೀರ್ಥರಿಗೆ ದಂಡವ್ಯತ್ಯಾಸದಿಂದ ಅಣುಸಂಸ್ಥಾನವನ್ನಿತ್ತು, ಅವರಿಗೆ ವಂಶರಾಮದೇವರನ್ನು ಹಾಗೂ ತೃತೀಯ ವ್ಯಾಸಮುಷ್ಟಿಕೆಯನ್ನು ಕೊಟ್ಟು ಕರ್ನಾಟಕ ದೇಶದ ದಿಗ್ವಿಜಕ್ಕೆ ಕಳುಹಿಸಿದರು. ಕರ್ನಾಟಕ ದಿಗ್ವಿಜಯಗೈದ ಯತಿವರೇಣ್ಯರಾದ ಶ್ರೀಸತ್ಯಾನಂದರು, ಗುರುಗಳು ಪೀಠವಾಳುವಾಗಲೇ ವೈಕುಂಠಯಾತ್ರೆ ಮಾಡಿದರು. (ಇವರ ವೃಂದಾವನವು, ಶ್ರೀಮಜ್ಜಯತೀರ್ಥರ ಮೂಲವೃಂದಾವನದ ಸಮ್ಮುಖದಲ್ಲಿದೆ). ಶ್ರೀಗಳು ಮತ್ತೊಬ್ಬ ಶ್ರೇಷ್ಠವಿದ್ವಾಂಸರನ್ನು ಕರೆದು ಆಶ್ರಮವಿತ್ತು ಶ್ರೀಗುಣನಿಧಿಗಳೆಂದು ನಾಮಕರಣ ಮಾಡಿ, ಅಣುಸಂಸ್ಥಾನವಿತ್ತರು. ಅವರೂ ಸಹ ಪೈಠಣ ಮುಂತಾದ ಸ್ಥಳಗಳಲ್ಲಿ ಸಂಚರಿಸಿ ಗುರುಗಳಿರುವಾಗಲೇ ವೃಂದಾವನಸ್ಥರಾದರು. ಶ್ರೀಸತ್ಯನಿಧಿ-ಗಳು ಇನ್ನೂ ಅನೇಕ ಶಿಷ್ಯರಿಗೆ [illegible] ಕೊಟ್ಟಿದ್ದರು. ೧. ಶ್ರೀಸುಮತಿ ಯತಿಗಳು (ಇವರು ಶ್ರೀಮದುತ್ತರಾದಿಮಠದ ೨೦ನೇ ಪೀಠಾಧಿಪತಿಗಳಾದ, ಶ್ರೀಸತ್ಯನಿಧಿ-ಗಳ ಪ್ರಶಿಷ್ಯರಾದ, ಶ್ರೀಸತ್ಯಾಭಿನವರ ಪೂರ್ವಾಶ್ರಮದ ತಂದೆಗಳು. ಇವರಿಗೆ ಆಶ್ರಮಕೊಡುವಾಗ ಶ್ರೀಸತ್ಯನಿಧಿಗಳು ನಿಮ್ಮ ಮಗ ಮುಂದೆ ಈಪೀಠವನ್ನಾಳು-ತ್ತಾನೆ. ಎಂದು ವರವಿತ್ತರಂತೆ ಆ ವರವಿಂದು ಸತ್ಯವಾಯಿತೆಂದು ಶ್ರೀಸತ್ಯಾಭಿನ-ವತೀರ್ಥರು ತಮ್ಮ ಗುರುಪರಂಪರಾಸ್ತೋತ್ರದಲ್ಲಿ ಹೇಳಿದ್ದಾರೆ.) ೨. ಶ್ರೀಕಲ್ಪರೀ ರಾಮಚಂದ್ರತೀರ್ಥರು. ೩. ಶ್ರೀಲಕ್ಷ್ಮೀಕಾಂತತೀರ್ಥರು. ೪. ಶ್ರೀಮುನೀಂದ್ರ-

ತೀರ್ಥರು. ೫. ಶ್ರೀವ್ಯಾಸತೀರ್ಥರು (ಮಣ್ಣೂರಿನವರು). ಗುರುಗಳಾದ ಶ್ರೀಸತ್ಯನಿಧಿಗಳು ಒಂದು ದೊಡ್ಡ ಸಭೆಯನ್ನು ಸೇರಿಸಿ ತಮ್ಮಿಂದ ಆಶ್ರಮ ಸ್ವೀಕರಿಸಿದ ಈ ಎಲ್ಲ ಯತಿಗಳನ್ನು ಹಾಗೂ ಶ್ರೀವೇದನಿಧಿಗಳಿಂದ ದಂಡವ್ಯತ್ಯಾ-ಸಹೊಂದಿದ್ದ ಸಾಂಗಲಿಯಲ್ಲಿ ೧೨ ವರ್ಷ ಅಖಂಡವಾಗಿ ಪಾಠಪ್ರವಚನದಲ್ಲಿ ದೀಕ್ಷಿತರಾದ ಶ್ರೀರಂಗನಾಥಯತಿಗಳನ್ನು ಬರಮಾಡಿಕೊಂಡು, ವಾಕ್ಯಾರ್ಥವನ್ನು ಆಯೋಜಿಸಿದರು. ಅವರಲ್ಲಿ ಶ್ರೀರಂಗನಾಥತೀರ್ಥರು ಮಹಾವಿದ್ವಾಂಸರು, ಕುಶಲರು, ತಪಸ್ವಿವರೇಣ್ಯರು, ಮಹಾ ಗುರುಭಕ್ತರು ಎಂಬುದನ್ನು ನಿಶ್ಚಯಿಸಿ ಅವರಿಗೆ ದಂಡವ್ಯತ್ಯಾಸಮಾಡಿ ಅಣುಸಂಸ್ಥಾನವನ್ನಿತ್ತು ಶ್ರೀಸತ್ಯನಾಥರೆಂದು ನಾಮಕರಣಮಾಡಿದರು. ಅವರಿಗೆ ವಂಶರಾಮದೇವರ ಪ್ರತಿಮೆ ಹಾಗೂ ತೃತೀಯ ವ್ಯಾಸಮುಷ್ಟಿಕೆಯನ್ನು ಕೊಟ್ಟು ಭಾಗ್ಯನಗರ ಮುಂತಾದವುಗಳಲ್ಲಿ ದಿಗ್ವಿಜಯಕ್ಕಾಗಿ ಕಳುಹಿಸಿದರು. ಶ್ರೀವ್ಯಾಸತೀರ್ಥರನ್ನು ಶ್ರೀಸತ್ಯನಾಥರಿಗೆ ಅನುಗತರನ್ನಾಗಿ ಮಾಡಿ ಪ್ರಸನ್ನ ವಿಠಲದೇವರ ಪ್ರತಿಮೆಯನ್ನು, ಚಪ್ಪಟ ವ್ಯಾಸಮುಷ್ಟಿಕೆಯನ್ನು ಕೊಟ್ಟು ಅವರನ್ನು ಬಿಜಾಪುರ ಮುಂತಾದ ಪ್ರದೇಶಗಳಲ್ಲಿ ದಿಗ್ವಿಜಯಕ್ಕೆ ಕಳುಹಿಸಿದರು.

ಶ್ರೀಸತ್ಯನಿಧಿಗಳು ಬಿಜಾಪುರದಲ್ಲಿ ತಮ್ಮ ಪ್ರಥಮಚಾತುರ್ಮಾಸ್ಯವನ್ನು ರಾಘವ ಪಂಡಿತನ ಸತ್ಕಾರದಲ್ಲಿ ಪೂರೈಸಿದರು. ಅಲ್ಲಿ ಒಂದು ವಾಕ್ಯಾರ್ಥಗೋ-ಷ್ಠಿಯನ್ನು ಆಯೊಜಿಸಿದ್ದರು. ಆ ಗೋಷ್ಠಿಯಲ್ಲಿ ಮುದ್ಗಲಾಚಾರ್ಯರೆಂಬ ಪಂಡಿ-ತರು, ತಮ್ಮ ಆರುಜನ ಪುತ್ರರು, ಮತ್ತು ಇಬ್ಬರು ಸೊದರಳಿಯಂದಿರೊಂದಿಗೆ ಉಪಸ್ಥಿತರಾಗಿ ವಾಕ್ಯಾರ್ಥಮಾಡಿ ಎಲ್ಲರ ಪ್ರಶ್ನೆಗಳಿಗೂ ಉತ್ತರವನ್ನಿತ್ತರು. ಇದರಿಂದ ಸಂತುಷ್ಟರಾದ ಶ್ರೀಗಳು ಅವರ ವಂಶಕ್ಕೆ "ನವರತ್ನ"ವೆಂಬ ನಾಮ-ಧೇಯನವನ್ನು ದಯಪಾಲಿಸಿದರು. ಇದೇ ವಂಶದಲ್ಲಿ ಮುಂದೆ ಶ್ರೀಸತ್ಯಧರ್ಮ-ತೀರ್ಥರು, ಮತ್ತು ಶ್ರೀಸತ್ಯಸಂಕಲ್ಪತೀರ್ಥರು ಎಂಬ ಪೀಠಾಧಿಪತಿಗಳು ಉದಯಿಸಿದರು. (ಬಾಳಾಚಾರ್ಯಕೃತ ನವರತ್ನವಂಶಜ ರತ್ನಮಾಲಿಕಾ ಮತ್ತು ಗುರುಚಂದ್ರ ಕಲೋದಯದಲ್ಲಿ ಉಲ್ಲಿಖಿತವಾಗಿದೆ.) ಶ್ರೀಸತ್ಯನಿಧಿಗಳು ಶ್ರೀರಾಘವೇಂದ್ರರ ಸಮಕಾಲೀನರು. ಇವರಿಗೂ ಶ್ರೀ ರಾಘವೇಂದ್ರ ಶ್ರೀಪಾದರಿಗೂ ಕುಂಭಕೊಣದಲ್ಲಿ ಭೇಟಿಯಾಗಿತ್ತೆಂದು ಕೇಳುತ್ತೇವೆ.

ಶ್ರೀಸತ್ಯನಿಧಿಗಳು ನರ್ಮದಾ, ಪ್ರಯಾಗ, ತ್ರಿವೇಣಿಸಂಗಮ, ಕಾಶೀ, (ಮುಕ್ತಿ-ಮಂಟಪದಲ್ಲಿ ವಾಕ್ಯಾರ್ಥ) ಗೋಕುಲ, ಮಥುರಾ, ಕುರುಕ್ಷೇತ್ರ, ಸ್ಯಮಂತ ಪಂಚಕ, ದ್ವಾರಕಾ, ಪ್ರಭಾಸ, ಬದರೀ, ಅಯೋಧ್ಯಾ ಗಯಾಕ್ಷೇತ್ರ,

ಪುರುಷೋತ್ತಮಕ್ಷೇತ್ರಗಳಲ್ಲಿ ಸಂಚರಿಸಿ ಕುಮತಿಗಳನ್ನು ಖಂಡಿಸಿ, ಅನೇಕ ಶಿಷ್ಯರನ್ನು ಉದ್ಧಾರಮಾಡಿದರು. ಬಿಜಾಪುರದಿಂದ ಕೃಷ್ಣಾ ತುಂಗಭದ್ರಾ ನದಿಗಳನ್ನು ದಾಟಿ ತಿರುಪತಿಕ್ಷೇತ್ರಕ್ಕೆ ಬಂದರು. ಶ್ರೀಶ್ರೀನಿವಾಸನ ಸನ್ನಿಧಾನದಲ್ಲಿ ಅನೇಕ ದಿನಗಳವರೆಗೆ ಬ್ರಾಹ್ಮಣರಿಗೆ ಯಥೇಚ್ಛ ದಕ್ಷಿಣೆಯನ್ನಿತ್ತು. ಶ್ರೀನಿವಾಸನನ್ನು ಸಂತೋಷಗೊಳಿಸಿದರು. ಶ್ರೀವೇದನಿಧಿಗಳಂತೆ ದಕ್ಷಿಣದಿಗ್ವಿಜಯ ಮಾಡಿ ಶ್ರೀಗಳು, ಕಂಚಿ, ಚಂಜಿ(ಜಂಜಿ)(ಚಾತುರ್ಮಾಸ್ಯ) ಅನಂತ ಪ್ರಭುವಿನ ಸತ್ಕಾರ, ಶ್ರೀಮುಷ್ಣ(ಪಾದಯಾತ್ರೇ) ದಂಡತೀರ್ಥ ಶ್ರೀರಂಗ, ವೃಷಭಾದ್ರಿ, ಮದುರೈ, ರಾಮೇಶ್ವರ, ಗಂಧಮಾದನಗಿರಿ, ಧನುಷ್ಕೋಟಿ, ತಾಮ್ರಪರ್ಣಿನದಿ, ಅನಂತಶ-ಯನ, ಜನಾರ್ದನ, ಗೋಕರ್ಣ, ಪಾಜಕ, ಉಡುಪಿ, ತುಮಕೂರು (ಇಲ್ಲಿ ಪ್ರಾಣದೇವರನ್ನು ಪ್ರತಿಷ್ಠಾಪಿಸಿ, ಶ್ರೀವಾಯುಭಾರತೀಸ್ತೋತ್ರವನ್ನು ವಿರಚಿಸಿ ಅಲ್ಲಿಯ ಭಕ್ತರಿಗೆ ಅನುಗ್ರಹಮಾಡಿದ್ದರು. ಪರಿಶಿಷ್ಠದಲ್ಲಿ, ಸ್ತೋತ್ರಕಾಣಬಹುದು) ಮುಂತಾದ ಕ್ಷೇತ್ರಗಳ ಮೂಲಕ ಕೃಷ್ಣಾನದಿಯನ್ನು ದಾಟಿ ಸಂಗಮೇಶ್ವರಕ್ಕೆ ಬಂದರು.

**ಮಂತ್ರಾಕ್ಷತೆಯ ಮಹಿಮ................**

ತಪೋವರೇಣ್ಯರಾದ ಶ್ರೀಸತ್ಯನಿಧಿತೀರ್ಥರು ಎಲ್ಲಡೆ ದಿಗ್ವಿಜಯ ಮಾಡಿ ಸಂಗಮೇಶ್ವರ ಕ್ಷೇತ್ರಕ್ಕೆ ಬಂದರು (ಕರ್ನೂಲಿನಿಂದ ೪೦ ಕಿ.ಮಿ. ದೂರದಲ್ಲಿ "ಎಲ್ಲಾಲ" ಎಂಬ ಗ್ರಾಮದ ಬಳಿ ಇದೆ.) ಅಲ್ಲಿ ನದಿಯ ದಂಡೆಯ ಮೇಲೆ ಧ್ಯಾನಕ್ಕೆ ಕುಳಿತರು. ಧ್ಯಾನಮುಗಿಯುತ್ತಿದ್ದಂತೆ ಸಮೀಪದ ಕೊಲ್ಲಾಪುರದ (ಮಹಬೂಬ್‌ನಗರ ಜಿಲ್ಲೆಯ ಆಲಂಪೂರಬಳಿ ಇದೆ.) ಅರಸ ಧಾವಿಸಿ ಬಂದ. ಸ್ವಾಮಿಗಳಿಗೆ ಸಾಷ್ಟಾಂಗವೆರೆಗಿ "ಪಾರುಮಾಡಿ ಪ್ರಭೋ! ಕರ್ನೂಲ್ ನವಾಬ ಮುತ್ತಿಗೆ ಹಾಕಲು ಬರುತ್ತಿದ್ದಾನೆ. ಉದ್ದಾರ ಮಾಡಿ", ಎಂದು ಪ್ರಾರ್ಥಿಸಿದ. ಸ್ವಾಮಿಗಳಿಗೆ ಭಾವ ವಿದಿತವಾಯಿತು. ಸಜ್ಜನರ ರಕ್ಷಣೆ ಆಗಬೇಕಿದೆ ಎಂದು ಮಂತ್ರಾಕ್ಷತೆಯನ್ನು ಕೊಟ್ಟರು, ಕೂಡಲೇ ಊರು ಸೇರಲು ಆಜ್ಞಾಪಿಸಿದರು. ಅದು ವೈಶಾಖಮಾಸ, ಕೃಷ್ಣಾನದಿ ಅಲ್ಲಲ್ಲಿ ಸಣ್ಣದಾಗಿ ಹರಿಯುತ್ತಿದೆ. ಹೀಗಾಗಿ ಕಾಲ್ನಡಿಗೆಯಿಂದ ದಾಟಬಹುದಿತ್ತು. ಅದಕ್ಕೆಂದೇ ಕರ್ನೂಲ್ ನವಾಬನು ಮುತ್ತಿಗೆ ಹಾಕಲು ಹೊಂಚುಹಾಕಿದ್ದ. ಶ್ರೀಗಳು ವರುಣನನ್ನು ಸ್ಮರಿಸಿದರು. ಕೂಡಲೇ ಕೃಷ್ಣಾನದಿ ತುಂಬಿಹರಿಯಿತು. ಸೈನಿಕರು ಹೊಳೆದಾಟುವಲ್ಲಿ ವಿಫಲರಾದರು, ಅವರು ಮುದೆಂದೂ ಕೊಲ್ಲಾಪುರದ ಮುತ್ತಿಗೆಯ ವಿಚಾರ ಮಾಡಲಿಲ್ಲ. ಇತ್ತ ರಾಜನಿಗೂ ಪರಮಾಶ್ಚರ್ಯ, ಪರಮಾನಂದ, ಪುನಃ ಶ್ರೀಗಳ ಬಳಿಬಂದು,

ಸ್ವಾಮಿ! ಮಹೋಪಕಾರ ಮಾಡಿದ್ದೀರಿ,ನಮ್ಮ ದೇಶವನ್ನು, ನಮ್ಮ ಸಂಸ್ಕೃತಿಯನ್ನು, ನಮ್ಮ ಸ್ತ್ರೀಯರನ್ನು, ಗ್ರಂಥಗಳನ್ನು, ಎಲ್ಲವನ್ನೂ ರಕ್ಷಿಸಿದ್ದೀರಿ. ನಾನು ನಿಮಗಿನ್ನು ದಾಸಾನುದಾಸ, ಈ ದಾಸನಿಗೆ ಸೇವಾಭಾಗ್ಯದೊರಕಿಸಿ ಕೊಡಿ ಎಂದು ಪ್ರಾರ್ಥಿಸಿದ.

ಶ್ರೀಪಾದಂಗಳವರು "ಈಕ್ಷೇತ್ರ ಪರಮಪವಿತ್ರ ದಕ್ಷಿಣಕಾಶಿಯಂತಿದೆ. ಏಳು ನದಿಗಳ ಸಂಗಮವಾಗುವ ಸ್ಥಳ, ಇಲ್ಲಿ ಮಿಂದರೆ ನಿವೃತ್ತಿಮಾರ್ಗಸಿಗುವುದು ನಿಶ್ಚಿತ. ಆದ್ದರಿಂದಲೇ ಇದು ನಿವೃತ್ತಿಸಂಗಮ. "ನಿವೃತ್ತಿಸಂಗಮೋ ಭಾತಿ ಯತ್ರ ಮರ್ತ್ಯಮುಪಾಶ್ರಿತಃ। ನಿವರ್ತಂತೇಽಖಿಲಾ ದೋಷಾಃ ಸಂಯುನಕ್ತಿ ಶುಭಾವಲಿಂ" ವಾದಿರಾಜರ. ತೀರ್ಥಪ್ರಬಂಧ)

ಪಾಂಡವರ ಪಾದಸ್ಪರ್ಶ ಪಡೆದ ಪುಣ್ಯಭೂಮಿ, ವಶಿಷ್ಠ ವಿಶ್ವಾಮಿತ್ರರ ತಪಸ್ಸಿನ ತಾಣ. ದೇವತೆಗಳ ಕ್ರೀಡೋದ್ಯಾನ, ಇಂಥ ಪಾವನ ಕ್ಷೇತ್ರದಲ್ಲೇ ನಾವು ವೃಂದಾವನಸ್ಥರಾಗಬೇಕೆಂದು ನಿಶ್ಚಯಿಸಿದ್ದೇವೆ. ಅನುಕೂಲ ಮಾಡಿಕೊಡಬೇಕು" ಎಂದು ಆಜ್ಞಾಪಿಸಿದರು. ರಾಜನು ಸ್ವಾಮಿ! ನನ್ನ ರಾಜ್ಯವೇ ತಮ್ಮದು. ಸಮಸ್ತ ಸಂಗಮೇಶ್ವರವನ್ನೇ ತಮಗೆ ದಾನಕೊಟ್ಟಿದ್ದೇನೆ, ಕೃಷ್ಣಾರ್ಪಣ ಎಂದ.

**ಪಾವನ ನಿವೃತ್ತಿ ಸಂಗಮ................**

ಕೃಷ್ಣಾ, ವೇಣೀ, ಮಲಾಪಹಾರಿ, ಭೀಮರಥೀ, ತುಂಗಾ, ಭದ್ರಾ, ಭವನಾಶಿನೀ ಎಂಬ ಸಪ್ತನದಿಗಳ ಬೀಡು. ಇಲ್ಲಿ ಸಿದ್ದೇಶ್ವರ, ಸೋಮೇಶ್ವರ, ಕಪಿಲೇಶ್ವರ, ಮಲ್ಲೇಶ್ವರ ಮತ್ತು ಸಂಗಮೇಶ್ವರ ಎಂಬ ಐದು ಕ್ಷೇತ್ರಗಳಿವೆ. ಈ ಐದೂ ಕ್ಷೇತ್ರ-ಗಳು ಪರಸ್ಪರ ಸಮೀಪದಲ್ಲಿವೆ. ಸಂಗಮೇಶ್ವರದ ಈಶ್ವರನನ್ನು ಧರ್ಮರಾಜನು ತನ್ನ ತಮ್ಮಂದಿರೊಡನೆ ಕೂಡಿ ಪ್ರತಿಷ್ಠಾಪಿಸಿದ್ದಾನೆ. ಧರ್ಮರಾಜನು ಈ ಕ್ಷೇತ್ರಕ್ಕೆ ಯಾತ್ರಾಕ್ರಮದಿಂದ ಬಂದಾಗ ಇಲ್ಲಿಯ ಪ್ರಶಾಂತವಾತಾವರಣ, ಪ್ರಕೃತಿಯ ಸೊಬಗು, ಪಾವಿತ್ರ್ಯ ಇವುಗಳನ್ನು ಕಂಡು ಈಶ್ವರನನ್ನು ಪ್ರತಿಷ್ಠಾಪಿಸಬೇಕೆಂದು ನಿಶ್ಚಯಿಸಿ, ಭೀಮಸೇನನಿಗೆ ಕಾಶಿಯಿಂದ ಲಿಂಗವನ್ನು ತರಲು ಆಜ್ಞಾಪಿಸಿದ. ಭೀಮನು ಬರುವುದು ತಡವಾಯಿತು. ಧರ್ಮರಾಜನು ಪೂರ್ವನಿಯೋಜಿತ ಮುಹೂರ್ತದಲ್ಲಿ ಶಾಸ್ತ್ರೋಕ್ತವಾಗಿ ಬ್ರಾಹ್ಮಣರ ಅಪ್ಪಣೆಯಂತೆ ಮರದ ಕಾಂಡವನ್ನೇ ಲಿಂಗವನ್ನಾಗಿ ಪ್ರತಿಷ್ಠಾಪಿಸಿ ಬಿಟ್ಟ ಜೊತೆಗೆ ಪಾರ್ವತೀಯನ್ನು ಷಣ್ಮುಖವನ್ನು ಪ್ರತಿಷ್ಠಾಪಿಸಿದ ನಂತರ ಭೀಮಸೇನನು ಬಂದ. ಪ್ರತಿಷ್ಠಾಪನೆ ಮುಗಿದಿತ್ತು. ಭೀಮನು ತಾ ತಂದ ಲಿಂಗವನ್ನು ನದಿಯಲ್ಲೆಸೆದ. ಧರ್ಮರಾಯನು ಆ ಲಿಂಗಕ್ಕೇ ಮೊದಲು ದರ್ಶನ, ಪೂಜೆ ಎಂದು ವರವಿತ್ತು ಭೀಮನನ್ನು

ಸಾಂತ್ವನಗೊಳಿಸಿದ. ಅದು ಭೀಮಲಿಂಗವೆಂದೇ ಪ್ರಸಿದ್ಧವಾಯಿತು. ಇದರ ಸಮೀಪದಲ್ಲಿ ರಥಾಲಯವೆಂಬ ದೇವಾಲಯವು ರಥಾಕಾರದಲ್ಲಿದೆ.

ಸಮೀಪದ ಪರ್ವತದಲ್ಲಿ ವಶಿಷ್ಠಕರಾರ್ಚಿತ ನರಸಿಂಹದೇವರಿದ್ದಾರೆ. ವಶಿಷ್ಠ–ರಿಂದ ಪ್ರತಿನಿತ್ಯ ಪೂಜಿತನಾಗುವ ಈ ನರಸಿಂಹನು ಒಮ್ಮೆ ಈ ಕ್ಷೇತ್ರಕ್ಕೆ ಬಂದಾಗ, ತನ್ನನ್ನು ಇಲ್ಲಿಯೇ ಪ್ರತಿಷ್ಠಾಪಿಸುವಂತೆ ಆಜ್ಞಾಪಿಸಿದ. ಆಜ್ಞೆಯಂತೆ ಪ್ರತಿಮೆಯನ್ನು ಇಲ್ಲಿ ಪ್ರತಿಷ್ಠಾಪಿಸಿದ್ದಾರೆ. (ಈ ಪ್ರತಿಮೆ ಈಗ ಕರ್ನೂಲಿನಲ್ಲಿದೆ. ಇದು ವಿಶ್ವಾ–ಮಿತ್ರರು ಗಾಯತ್ರೀಯನ್ನು ಪ್ರತ್ಯಕ್ಷಿಸಿಕೊಂಡ ಪವಿತ್ರ ಸ್ಥಾನ. ಗಾಯತ್ರೀಪಾದಗಳು ಒಡಮೂಡಿವೆ. ದುರ್ಗಾದೇವಿ ಅಲ್ಲಿಯ ಗುಹೆಯೊಳಗಿದ್ದಾಳೆ. ಈ ಸ್ಥಾನದಲ್ಲಿ ಚಕ್ರತೀರ್ಥ, ಸೌಭಾಗ್ಯತೀರ್ಥವೇ ಮೊದಲಾದ ಹನ್ನೆರಡು ತೀರ್ಥಗಳಿವೆ.

ಶ್ರೀಪಾದಂಗಳವರು ಇಂತಹ ಪಾವನ ಕ್ಷೇತ್ರವನ್ನು ಪಡೆದು, ಅಲ್ಲಿಯ ಪ್ರಾಚೀನ ಪಾಂಡವ ನಿರ್ಮಿತ ಶಿವಾಲಯವನ್ನು ಜೀರ್ಣೋದ್ಧಾರಮಾಡಿ ಮಂಟಪಗಳನ್ನು ಕಟ್ಟಿಸಿದರು. ಧರ್ಮರಾಜ ಪ್ರತಿಷ್ಠಾಪಿಸಿದ ಅಲ್ಲಿಯ ಸಂಗಮೇ–ಶ್ವರನಿಗೆ ಕಲ್ಯಾಣ ಮಂಟಪವನ್ನು ನಿರ್ಮಿಸಿದರು. ಭೀಮನ ಲಿಂಗಕ್ಕೆ ಸುತ್ತಲು ಕಟ್ಟೆಯನ್ನು ಕಟ್ಟಸಿ, ನದಿಗೆ ಹೋಗುವಲ್ಲಿ ದ್ವಾರಮಂಟಪ ಮತ್ತು ಮೆಟ್ಟಿಲುಗಳನ್ನು ನಿರ್ಮಾಣ ಮಾಡಿಸಿದ್ದಾರೆ. ಅಲ್ಲಿಯೇ ವ್ಯಾಸಕಟ್ಟೆಯನ್ನು ಕಟ್ಟಿಸಿ ಮುಖ್ಯಪ್ರಾಣ–ದೇವರನ್ನು ಪ್ರತಿಷ್ಠಾಪಿಸಿದ್ದರು ಅಲ್ಲಿ ನಿತ್ಯ ಪುರಾಣ ಶ್ರವಣವಾಗುತ್ತಿತ್ತು. ಸೌಭಾಗ್ಯ–ತೀರ್ಥ, ಚಕ್ರತೀರ್ಥ ಮೊದಲಾದ ೧೨ ತೀರ್ಥಗಳ ಸಮೀಪದಲ್ಲಿ ಮಂಟಪ–ಗಳನ್ನು ನಿರ್ಮಿಸಿದರು. ವಶಿಷ್ಠಕರಾರ್ಚಿತ ನರಸಿಂಹದೇವರ ಪೂಜಾವ್ಯವಸ್ಥೆಯನ್ನು ಮಾಡಿದರು. ವಿಶ್ವಾಮಿತ್ರರ ಗುಹಾ, ಗಾಯತ್ರೀಪಾದ ಮುಂತಾದವುಗಳ ದಾರಿ ದುರಸ್ತಿ ಗೊಳಿಸಿದರು. ಸ್ವಾಮಿಗಳು ಸ್ವಯಂ ಕಲಾಕುಶಲರು. ಅವರು ತಮ್ಮ ವೃಂದಾವನವನ್ನು ತಾವೇ ನಿಂತು ಕೆತ್ತಿಸಿದರು. ವೃಂದಾವನದಲ್ಲಿ ಕೇಶವಾದಿ ೨೪ ಮೂರ್ತಿಗಳು, ಕಾಮಧೇನು ಮತ್ತು ತಮ್ಮ ಪ್ರತೀಕವನ್ನು ಕಮಂಡಲು ದಂಡ–ದೊಂದಿಗೆ ಕೆತ್ತಿಸಿದ್ದಾರೆ. ತಮ್ಮ ಪ್ರಿಯಶಿಷ್ಯರಾದ ಶ್ರೀಸತ್ಯನಾಥರ ಪ್ರತಿಮೆಯನ್ನು ಇರಿಸಿಕೊಂಡರು. ತಮ್ಮ ವೃಂದಾವನದ ಸಮ್ಮುಖದಲ್ಲಿ ಮುಖ್ಯಪ್ರಾಣದೇವರನ್ನು ಪ್ರತಿಷ್ಠಾಪಿಸಿದರು. ಅಲ್ಲಿ ಅವರ ಮನೆಯೊಂದಿದೆ. ಅಲ್ಲಿಯ ಬಿತ್ತಿಗಳ ಮೇಲೆ ಶಾಸ್ತ್ರಪಂಕ್ತಿಗಳನ್ನು ಕೆತ್ತಿಸಿದ್ದಾರೆ. ಆ ಮನೆಯಲ್ಲಿ ಕೇಶವದೇವರ ಹಾಗೂ ಮುಖ್ಯಪ್ರಾಣದೇವರ ಮೂರ್ತಿಗಳನ್ನು ಸ್ಥಾಪಿಸಿದ್ದರು. (ಕೇಶವದೇವರ ಪ್ರತಿಮೆ ಈಗ ಗುಂಟೂರು ಉತ್ತರಾದಿಮಠದಲ್ಲಿದೆ). ಇಲ್ಲಿ ನಿತ್ಯವು ನೂರಾರುಜನರ ಭೋಜನವಾಗುತ್ತಿತ್ತು. ಸಮೀಪದ ಅಗ್ರಹಾರದಲ್ಲಿ ನೂರಾರು ಪಂಡಿತರು

ವಾಸಿಸುತ್ತಿದ್ದರು. ಅವರಲ್ಲಿ ಪ್ರಸಿದ್ಧವ್ಯಾಖ್ಯಾನಕಾರರಾದ ಶ್ರೀಛಲಾರೀ ಶೇಷಾಚಾರ್ಯರೂ ಒಬ್ಬರು. ವಾಸಿಸಲು ಮನೆಗಳನ್ನು ದಾನ ಮಾಡಿದರು. ಎಲ್ಲ ದೇವಾಲಯಗಳಲ್ಲೂ ಪೂಜಾವ್ಯವಸ್ಥೆಮಾಡಿ, ಅರ್ಚಕರಿಗೆ, ಪಾಚಕರಿಗೆ, ಸೇವಕರಿಗೆ, ಮೇಳದವರಿಗೆ, ಎಲ್ಲರಿಗೂ ಭೂಮಿಗಳನ್ನು ಕೊಟ್ಟರು. ಈ ಪ್ರಾಂತದ ಬ್ರಾಹ್ಮಣರಿಗೆ ವಶಿಷ್ಠಕರಾರ್ಚಿತ ನರಸಿಂಹನೇ ಕುಲದೈವನಾದ. ಪರಮ ಪವಿತ್ರವಾದ ಈ ಸಂಗಮೇಶ್ವರದ ಮಹಿಮೆ, ವಾಯುಪುರಾಣದಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ. (ಈ ಎಲ್ಲ ಭಾವ ಚಿತ್ರಗಳು ಪರಿಶಿಷ್ಠದಲ್ಲಿವೆ.) ಶ್ರೀಗಳು, ರಾಮದೇವರಿಗೆ ಅನೇಕ ಆಭರಣಗಳನ್ನು ಮಂಟಪಗಳನ್ನು ಮಾಡಿಸಿ ವೈಭವದಿಂದ ಪೂಜೆ ಮಾಡುತ್ತಿದ್ದರು. ಇವರು ತಮ್ಮ ಸ್ವಹಸ್ತದಿಂದಲೇ ಚಿತ್ರಿಸಿದ ಆಂಜನೇಯನ ಚಿತ್ರ ಸ್ವರ್ಣಫಲಕದಲ್ಲಿ (ಶ್ರೀಮಠದಲ್ಲಿ) ವಿರಾಜಿಸುತ್ತಿದೆ. ಅದರ ಮೇಲೆಯೇ ಶ್ರೀಮೂಲರಾಮದೇವರ ದೋಲೋತ್ಸವ ಇಂದಿಗೂ ನಡೆಯುತ್ತದೆ.

ಶ್ರೀಗಳು ಅನೇಕ ಭಕ್ತರಿಗೆ ಮಂತ್ರೋಪದೇಶಮಾಡಿ, ಪ್ರತಿಮೆಗಳನ್ನು ಇತ್ತಿದ್ದಾರೆ. ಶ್ರೀಛಲಾರೀ ಸಂಕರ್ಷಣಾಚಾರ್ಯರೂ ಇವರಿಂದ ನಾರಾಯಣ ಮಂತ್ರೋಪದೇಶ ಪಡೆದೆನೆಂದು ಜಯತೀರ್ಥ ವಿಜಯದಲ್ಲಿ ಮತ್ತು ತಂತ್ರಸಾರ ಸಂಗ್ರಹವ್ಯಾಖ್ಯಾನದಲ್ಲಿ ಹೇಳಿಕೊಂಡಿದ್ದಾರೆ.

**ಸಾಧನೆಯ ಸೊಬಗು.............**

ಶ್ರೀಸತ್ಯನಿಧಿಗಳ ಧ್ಯಾನ, ಕಾಲದಕಡಿವಾಣ ವಿಲ್ಲದ್ದು. ಸ್ವಾಮಿಗಳು, ಸಮಾಧ್ಯವಸ್ಥೆಯಿಂದ, ಇಹ ಪ್ರಪಂಚಕ್ಕೆ ಯಾವಾಗ ಹಿಂತಿರುಗುವರೆಂದು ಯಾರಿಗೂ ಖಚಿತವಲ್ಲ.

ಪ್ರಾತಃ ಕಾಲದಲ್ಲಿ ಆರಂಭಗೊಂಡ ಧ್ಯಾನಯೋಗ, ಶಶಿಕಿರಣಗಳ ಸಂಯೋಗವನ್ನು ಪಡೆಯುತ್ತಿತ್ತು. ಧ್ಯಾನ ಮುಗಿಯುತ್ತಿರುವಂತೆ ಪೂಜಾಪ್ರಾರಂಭ. ಅಲ್ಲಿಯೂ ಸಂಕೋಚದ ಸಂಕೋಲೆಗಳಿಲ್ಲ. ವೈಭವೋಪೇತವಾಗಿ, ಸಕ್ರಮವಾಗಿ, ಪರಮೋತ್ಸಾಹ ಪರಮಭಕ್ತಿಗಳಿಂದ ಶ್ರೀಪಾದರು ಶ್ರೀರಾಮದೇವರ ಕೈಂಕರ್ಯವನ್ನು ನೆರವೇರಿಸುತ್ತಿದ್ದರು. ಈಡೀ ಜೀವನವನ್ನೇ ರಾಮದೇವರ ಪೂಜಾಕುಸುಮವೆಂದು ಸಮರ್ಪಿಸುವವರಿಗೆ ಸಮಯದ ನಿರ್ಬಂಧವಿಲ್ಲದ್ದೇನು ಆಶ್ಚರ್ಯವಲ್ಲ. ಇದೆ ನಿಜವಾದ ದಾಸ್ಯ ಸಾಧನೆಯ ಸೊಬಗು ಭಕ್ತಿಯ ಪರಾಕಾಷ್ಠತೆ. ಸಮಾಧಿಯೋಗದ ಪರಿಪಾಕ.

ಶ್ರೀಪಾದಂಗಳವರು ದಯಾಮಯರು ಶ್ರೀಸಾಮಾನ್ಯರನ್ನು, ವಿದ್ಯಾರ್ಥಿಗ–

ಳನ್ನು ವಿದ್ವಾಂಸರನ್ನು ಉಪವಾಸ ಕಾಯಿಸುವವರಲ್ಲ. ಪ್ರಾತಃ ಕಾಲದಲ್ಲಿ ನಿರ್ಮಾಲ್ಯವಿಸರ್ಜನೆಯನ್ನು ಮುಗಿಸಿ ಭಕ್ತರಿಗೆಲ್ಲ ನಿರ್ಮಾಲ್ಯತೀರ್ಥ, ಬೆಲ್ಲ, ಗೋಧಿಹುರಿಹಿಟ್ಟಿನ, ಪ್ರಸಾದವನ್ನು ವಿತರಿಸುತ್ತಿದ್ದರು. ಪ್ರಸಾದಸ್ವೀಕರಿಸಿದ ವಿದ್ಯಾರ್ಥಿಗಳು ವಿದ್ವಾಂಸರು, ತಮ್ಮ ತಮ್ಮ ಪಾಠಪ್ರವಚನಗಳಲ್ಲಿ ತೊಡಗುತ್ತಿದ್ದರು. (ಇಂದಿಗೂ ಆರಾಧನೆಯ ಸಂದರ್ಭದಲ್ಲಿ ಬೆಲ್ಲ, ಗೋಧಿಹುರಿಹಿಟ್ಟಿನ ನೈವೇದ್ಯ ಮಾಡಲಾಗುತ್ತಿದೆ.)

ಈ ರೀತಿ ಸಕಲಕುಮತಗಳನ್ನು ದೂರೀಕರಿಸಿ, ದುಷ್ಟರನ್ನು ದಮನ ಮಾಡಿ, ಶಿಷ್ಟರನ್ನು ಪರಿಪಾಲಿಸುತ್ತ, ಧರ್ಮಧ್ವಜವನ್ನು ಹಾರಿಸಿ, ದ್ವೈತದುಂದುಭಿಯನ್ನು ಆಸೇತುಹಿಮಾಚಲ ಮೊಳಗಿಸಿ ಸುಜನರ ಮನೋರಥಗಳನ್ನು ಪೂರ್ಣಗೊಳಿಸಿ ಶ್ರೀಸತ್ಯನಿಧಿತೀರ್ಥರು ಸತ್ಯನಾಥತೀರ್ಥರನ್ನು ವೇದಾಂತಸಾಮ್ರಾಜ್ಯ ಸಿಂಹಾಸ-ನದಲ್ಲಿ ಸಂಸ್ಥಾಪಿಸಿ, ಬ್ರಾಹ್ಮಣರಿಗೆ ಸರ್ವಸ್ವ ದಾನಮಾಡಿ, ತಮ್ಮ ಕರ್ತವ್ಯಗಳನ್ನೆಲ್ಲಾ ಪೂರೈಸಿ, ಶ್ರೀರಾಮಚಂದ್ರನ ಚರಣದ್ವಂದಗಳಲ್ಲಿ ಸಮರ್ಪಿಸಿ ಶಾರ್ವರೀ (೧೬೬೦) ನಾಮ ಸಂವತ್ಸರ ಮಾರ್ಗಶೀರ್ಷ ಶುದ್ಧ ದಶಮಿಯಂದು ವಿಶ್ವವನ್ನು ಅನುಗ್ರಹಿಸುತ್ತ ದಂಡಕಮಂಡಲು ಜಪಮಾಲೆಗಳನ್ನು ಹಿಡಿದು ನೂರಾರು ಭಕ್ತರು ನೋಡುನೋಡುತ್ತಿದ್ದಂತೆಯೇ ವೃಂದಾವನವನ್ನು ಪ್ರವೇಶ ಮಾಡಿದರು. ಶಿಷ್ಯರಿಗೆಲ್ಲ ಪ್ರತ್ಯಕ್ಷವಾಗಿ ಕಂಡರೂ ನಂಬಲಾಗದಸ್ಥಿತಿ! ತಡೆಯಲಾಗದವಿರಹ! ಹತ್ತಿಕ್ಕಿದಷ್ಟು ಉಕ್ಕೇರುವ ದುಃಖ! ಎಲ್ಲರ ನೇತ್ರಗಳು ಅಶ್ರುಪೂರ್ಣವಾಗಿ, ಪ್ರವಾಹವಾಗಿ ಸಪ್ತನದಿಗಳನ್ನು ಮೀರುವ ಹೊಳೆಯಾಗಿ ಹರಿಯಿತು. ಗುರುಭಕ್ತಾ-ಗ್ರೇಸರರಾದ (ಶ್ರೀಸತ್ಯನಾಥತೀರ್ಥರು) ಗುರುಗಳಾದ (ಶ್ರೀಸತ್ಯನಿಧಿತೀರ್ಥರ) ಮಹಿಮಾಸುಧಾ ರಸದಿಂದ ಭಕ್ತರನ್ನು ತಲ್ಲಣಗೊಳಿಸಿದರು.

ಶ್ರೀಸತ್ಯನಿಧಿತೀರ್ಥರ ವೃಂದಾವನವನ್ನು ಸೇವಿಸಿ ಎಷ್ಟೋ ಭಕ್ತರು ಪರಮಾ-ನುಗ್ರಹ ಪಡೆದುಕೊಂಡಿದ್ದಾರೆ. ಛಲಾರೀ ಆಚಾರ್ಯರು ಅವರಲ್ಲೊಬ್ಬರು. ಅವರ ಉದ್ಗಾರ ಹೀಗಿದೆ.

**विद्यापत्यादिसंपत्तीः यद्वृंदावनसेवनात् ।**
**लभंते मद्गुरुं मर्त्यः तं सत्यनिधिमाश्रये ।।**

ಮಾನವರು ಸಂತಾನ, ವಿದ್ಯೆ, ಇವೇ ಮೊದಲಾದ ಎಲ್ಲ ಸಂಪತ್ತುಗಳನ್ನು ಯಾರ ವೃಂದಾವನಸೇವನೆಯಿಂದ ಹೊಂದುವರೋ ಅಂಥಹ ನಮ್ಮ ಗುರುಗ-ಳಾದ ಸತ್ಯನಿಧಿಗಳನ್ನು ಆಶ್ರಯಿಸುವೆ.

**"ಏಕಾದಶಿಯಂದು ಬರುತ್ತೇವೆ"......................**

ಮಹಾಗುರುಭಕ್ತರೂ, ವೈರಾಗ್ಯನಿಧಿಗಳೂ, ವಿದ್ವತ್ಪ್ರಿಯರೂ, ಪಂಚಾಭಿನವ-ಕಾರರೂ, ಅಭಿನವ ವ್ಯಾಸರಾಜರೆಂದು ವಿದ್ವತ್ಪ್ರಪಂಚದಲ್ಲಿ ಪ್ರಸಿದ್ಧರಾದ ಶ್ರೀಸತ್ಯನಾಥರ ಶ್ರೇಷ್ಠ ಗುರುಭಕ್ತಿ ದ್ಯೋತಕವಾದ ವಚನವಿದು.

ಮಾರ್ಗಶೀರ್ಷಮಾಸ, ಶುಕ್ಲಪಕ್ಷ, ಪಂಚಮಿ, ಶ್ರೀಸತ್ಯನಾಥ ಶ್ರೀಪಾದಂಗಳ-ವರು ತಮ್ಮ ದೈನಂದಿನ ಕರ್ತವ್ಯ ಕರ್ಮಗಳನ್ನು ಮುಗಿಸಿದ್ದಾರೆ. ಎದುರಿಗೆ ವಿಷ್ಣುದೂತರು ಬಂದು "ತಾವಿನ್ನು ಬರಬೇಕು" ಎಂದರು. ದಶಮಿಯ ದಿನದಂದು ನಮ್ಮ ಗುರುಗಳ ಆರಾಧನೆ ಇದೆ, ಗುರುಗಳ ಸೇವೆ ವಿಶೇಷವಾಗಿ ಮಾಡಬೇಕಾಗಿದೆ. ಇಂದೇ ನಿಮ್ಮೊಡನೆ ಬಂದರೆ, ಗುರುಗಳ ಆರಾಧನೆಯ ಉತ್ಸಾಹ ಶಿಷ್ಯರಲ್ಲಿ ಕುಂಠಿತವಾಗುತ್ತದೆ. ನಮ್ಮ ಆರಾಧನೆಯ ವೈಭವ ಹೆಚ್ಚುತ್ತದೆ. ಕಾರಣ ನಾನು "ಏಕಾದಶಿಯಂದು ಬರುತ್ತೇನೆ" ಎಂದರು ಶ್ರೀಸತ್ಯನಾಥರು. ಇವರ ಗುರುಭಕ್ತಿಗೆ ಮೆಚ್ಚಿ ವಿಷ್ಣುದೂತರು ತೆರಳಿದರು. ಮುಂದೆ, ಅತಿ ವಿಜೃಂಭ-ಣೆಯಿಂದ ಮಹಾಸಮಾರಾಧನೆಯನ್ನು ಅನೇಕ ವಾಕ್ಯಾರ್ಥ ದಾನ ಪೂಜಾದಿಗ-ಳಿಂದ ನೆರವೇರಿಸಿ ತಮ್ಮ ನಿಸ್ಸೀಮ ಗುರುಭಕ್ತಿಯನ್ನು ಪ್ರಕಟ ಪಡಿಸಿದರು.

ಶ್ರೀಶೈಲದ ಬಳಿಯ ಕೃಷ್ಣಾನದಿಗೆ ನಾಗಾರ್ಜನಸಾಗರ ಆಣೆಕಟ್ಟನ್ನು ನಿರ್ಮಿ-ಸುವ ಯೋಜನೆಯಲ್ಲಿ ಪುರಾಣಪ್ರಸಿದ್ಧ, ಪರಮಪವಿತ್ರ, ರಮಣೀಯ ಕ್ಷೇತ್ರವಾದ ಸಂಗಮೇಶ್ವರ ಮುಳುಗಡೆಯಾಗುವ ಪ್ರಸಂಗ!!! ಶ್ರೀಸತ್ಯನಿಧಿಗಳ ವೃಂದಾವ-ನವೂ ಮುಳುಗುವ ಪರಿಸ್ಥಿತಿ, ವೃಂದಾವನವನ್ನು ಸಮಸ್ತ ಅವಶೇಷಗಳೊಂದಿಗೆ ಸ್ಥಳಾಂತರಿಸಬೇಕೆಂದು ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ದೃಢ ನಿರ್ಧಾರ.

ಕಾಲಯುಕ್ತನಾಮ ಸಂವತ್ಸರ, ಮಾಘ ಬಹುಳ ಪಂಚಮೀ (17.02.1979) ಶನಿವಾರ ಸಂಗಮೇಶ್ವರದಲ್ಲಿ ಶ್ರೀಸತ್ಯಪ್ರಮೋದರು ಶ್ರೀಸತ್ಯನಿಧಿತೀರ್ಥರ ಸನ್ನಿಧಾನದಲ್ಲಿ ಶ್ರೀರಾಮದೇವರ ಪೂಜೆ ಮುಗಿಸಿ, ವೃಂದಾವನಕ್ಕೆ ಹಸ್ತೋದಕ ಸಮರ್ಪಿಸಿ, ಶ್ರೀಸತ್ಯಧ್ಯಾನತೀರ್ಥರ ನೆಚ್ಚಿನ ಶಿಷ್ಯರಾದ ಪಂಡಿತ ಶ್ರೀವಾಲ-ಕೊಂಡ ನರಸಿಂಹಾಚಾರ್ಯರಿಂದ ವೃಂದಾವನ ಕಲಾಕರ್ಷಣ ಮಾಡಿಸಿ ಎಲ್ಲ ಶಿಲೆಗಳಿಗೂ ಕ್ರಮವಾಗಿ ಸಂಖ್ಯೆಗಳನ್ನು ಬರೆಯಿಸಿದರು. ಪಂಡಿತರಾದ ಶ್ರೀನರ-ಸಿಂಹಾಚಾರ್ಯರು, ಯದುಪತ್ಯಾಚಾರ್ಯರು, ದಿವಾನ್ ಪ್ರಲ್ಹಾದಾಚಾರ್ಯರು, ಧೀರೇಂದ್ರಾಚಾರ್ಯರ ಪೂಜಾರ್, ರಾಮೂರ್ತ್ಯಾಚಾರ್ ಪಗಡಾಲ್, ಕೃಷ್ಣಮೂರ್ತ್ಯಾಚಾರ್ ಪಗಡಾಲ್, ಮಿಶ್ರಿಕೊಟಿ ಗೋವಿಂದಾಚಾರ್ಯ

ಮುಂತಾದವರಿಂದೊಡಗೂಡಿ ವೃಂದಾವನದ ಜಾಗ ಅಗೆಯಲು ಪ್ರಾರಂಭಿಸಿದರು. ಅಗೆಯುತ್ತಿದ್ದಂತೆ ಮಲ್ಲಿಗೆಯ ಸುಗಂಧ ಎಲ್ಲಡೆ ಪರಿಮಳಿಸಿತು. ಸುಮಾರು ೧೦ ಅಡಿ ಅಗೆಯುತ್ತಿದ್ದಂತೆ ಮುಸ್ಸಂಜೆ ಏಳುಘಂಟೆಯ ಹೊತ್ತಿಗೆ ಶ್ರೀಸತ್ಯನಿಧಿತೀರ್ಥರ ಅವಶೇಷಗಳು ಪ್ರತ್ಯಕ್ಷವಾದವು. ಅಲ್ಲಿ ಶ್ರೀಸತ್ಯನಿಧಿತೀರ್ಥರ ಜಲಪೂರ್ಣವಾದ ಕಮಂಡಲು, ನರಸಿಂಹಶಾಲಿಗ್ರಾಮ, ಪಂಚಮುದ್ರೆಗಳು, ಗೋಪೀಚಂದನ, ಒಂದು ಸಂಪುಷ್ಟ ಹಾಗೂ ಶ್ರೀಸತ್ಯನಿಧಿತೀರ್ಥರು ಆಸೀನರಾದ ಪೀಠದ ಅಂಚಿ-ನಲ್ಲಿರುವ ಕೆಲವು ಪದ್ಮಗಳು ದೊರೆತವು. ಶ್ರೀಸತ್ಯಪ್ರಮೋದಶ್ರೀಪಾದಂಗಳವರು ನೆರೆದವರಿಗೆಲ್ಲ ಶ್ರೀಸತ್ಯನಿಧಿತೀರ್ಥರ ಕಮಂಡಲದ ಗಂಗಾಜಲವನ್ನು ಪ್ರೋಕ್ಷಿಸಿ-ದರು. ಆ ಸಮಯದಲ್ಲಿ ಅಲ್ಲಿ ನೆರೆದವರೇ ಧನ್ಯರು. ಮರುದಿನ ಎಲ್ಲರೂ ಪಾದಚಾರಿಗಳಾಗಿ ಅವಶೇಷಗಳನ್ನು ಶಿರದಲ್ಲಿ ಧರಿಸಿ ಹೊರಟರು. ಪಂ. ಪಗಡಾಲ ವೇದವ್ಯಾಸಾಚಾರ್ಯರೂ ಒಬ್ಬರು. ಎಲ್ಲರೂ 19.02.1979 ಸೋಮವಾರ ಮಾಘ ಬಹುಳ ಸಪ್ತಮೀ ಕಾಲಯುಕ್ತನಾಮ ಸಂವತ್ಸರ ಸಂಜೆ ಹೊತ್ತಿಗೆ ಕರ್ನೂಲ್ ಉತ್ತರಾದಿಮಠವನ್ನು ತಲುಪಿದರು. ಶ್ರೀಪಾದಂಗಳವರು ಭಕ್ತರಿಗೆಲ್ಲ ಶ್ರೀಸತ್ಯನಿಧಿತೀರ್ಥರ ಮಹಿಮೆಗಳನ್ನು ಉಪದೇಶಿಸಿದರು. ಕರ್ನೂಲಿನ ಅನೇಕ ಗಣ್ಯಗೃಹಸ್ಥರ ಸಹಾಯದೊಂದಿಗೆ ಪಂ. ರಾಮಮೂರ್ತಿ ಆಚಾರ್ಯರು ಶ್ರೀಸತ್ಯನಿಧಿತೀರ್ಥರ ವೃಂದಾವನವು ಸಂಗಮೇಶ್ವರದಲ್ಲಿ ಹೇಗೆ ಇತ್ತೋ ಅದೇರೀತಿ ಕರ್ನೂಲ್‌ನಲ್ಲಿ ನಿರ್ಮಿಸಿದ್ದಾರೆ. ಅಲ್ಲಿಯದೇ ಕಲ್ಲುಗಳು, ಅದೇ ಕ್ರಮಾಂಕದಲ್ಲಿ ಜೋಡಿಸಿ ಅಭಿನವ ಸಂಗಮೇಶ್ವರವನ್ನು ನಿರ್ಮಾಣಮಾಡಿದ್ದಾರೆ. ನಿಜವಾಗಿಯು ಇದು ಸ್ತುತ್ಯ. ಸಂಗಮೇಶ್ವರ ನೊಡದವರಿಗೆ ಕನಿಷ್ಠಪಕ್ಷ ಶ್ರೀಸತ್ಯನಿಧಿತೀರ್ಥರ ಆವರಣ ಹೇಗಿತ್ತೆಂದು ತಿಳಿಯಲು ಮಹೋಪಕಾರಮಾ-ಡಿದಂತೆ ಆಗಿದೆ. ಸಂಗಮೇಶ್ವರವನ್ನು, ಅಲ್ಲಿಹೋಗುವ ದಾರಿಯನ್ನು,ಆಗಿನಕಾಲದ ಪರಿಸ್ಥಿತಿಯನ್ನು ಅರಿತವರಿಗೆ, ಈ ಭಕ್ತರ ಶ್ರಮವೇನೆಂದು ಅರ್ಥವಾಗುತ್ತದೆ.

ಶ್ರೀಸತ್ಯನಿಧಿತೀರ್ಥರ ವೃಂದಾವನದಲ್ಲಿ ಕೇಶವಾದಿ ೨೪ ಮೂರ್ತಿಗಳು, ಶ್ರೀಸತ್ಯನಿಧಿತೀರ್ಥರ ಪ್ರತೀಕ, ಕಾಮಧೇನು, ಕಮಂಡಲಗಳು ಕಂಗೊಳಿಸುತ್ತಿವೆ. ಇಂತಹ ಪವಿತ್ರತಮ್ಮ ಗುರುಗಳ ವೃಂದಾವನ ಸೇವೆ ಮಾಡಿ ನೂರಾರು ಭಕ್ತರು ಅನುಗ್ರಹ ಪಡೆದುಕೊಂಡಿದ್ದಾರೆ. ಶ್ರೀಪಾದರು ಅದ್ಯಾಪಿ ಭಕ್ತರನ್ನು ಅನುಗ್ರಹಿಸಲು ಕೃಷ್ಣಾದಡದಿಂದ ತುಂಗಭದ್ರಾ ದಡಕ್ಕೆ ಬಂದಿದ್ದಾರೆ. ಭಕ್ತರ ಪಾಲಿಗೆ ಕಾಮಧೇನು ಕಲ್ಪವೃಕ್ಷ ಚಿಂತಾಮಣಿಯಾಗಿ ವಿರಾಜಿಸುತ್ತಿದ್ದಾರೆ.

---



ಪಾಂಡವರು ನಿರ್ಮಿಸಿದ ಶಿವಾಲಯ



ವ್ಯಾಸಕಟ್ಟೆ, ಸಪ್ತನದಿಗಳ ಸಂಗಮಕ್ಕೆ ಹೋಗುವ ದಾರಿ



ವಸಿಷ್ಠ ಪ್ರತಿಷ್ಠಿತ ಯೋಗಾನರಸಿಂಹ



ಸೂರ್ಯನಾರಾಯಣ



ವಿಶ್ವಾಮಿತ್ರರ ಗುಹೆ



ಗಾಯತ್ರೀ ಪಾದ



ಸತ್ಯನಿಧಿಗಳ ಮನೆಯ ಗೋಡೆ ಇಲ್ಲಿ ಶಾಸ್ತ್ರಪಂಕ್ತಿಗಳನ್ನು ಕೆತ್ತಿದ್ದಾರೆ.



ಸತ್ಯನಿಧಿಗಳಿಂದ ಪ್ರತಿಷ್ಠಿತ ಕೇಶವದೇವರು



ಸತ್ಯನಿಧಿಗಳ ಮನೆಯಲ್ಲಿಯ ಪ್ರಾಣದೇವರು



ಸತ್ಯನಿಧಿಗಳಿಂದ ಪೂಜಿತ ಕೇಶವ ಹಾಗೂ ಆಂಜನೇಯ ವಿಗ್ರಹಗಳು



ಶ್ರೀ ಸತ್ಯನಿಧಿತೀರ್ಥ ಕರಾರ್ಚಿತ ಶ್ರೀ ಹಯಗ್ರೀವ



ಶ್ರೀರಾಮಚಂದ್ರ



ಸಂಗಮೇಶ್ವರದಲ್ಲಿದ್ದ ಸತ್ಯನಿಧಿಗಳ ಮಂಟಪ



ಶ್ರೀ ಸತ್ಯನಿಧಿಗಳ ಮೂಲ ವೃಂದಾವನ



ವೃಂದಾವನದ ಮುಖಭಾಗ



ವೃಂದಾವನದ ಬಲಭಾಗ



ಶ್ರೀ ಸತ್ಯನಿಧಿಗಳ ವೃಂದಾವನದ ಹಿಂಭಾಗ



ವೃಂದಾವನದ ಎಡಭಾಗ



ಸತ್ಯನಿಧಿಗಳಿಂದ ಪೂಜಿತ ಮುಖ್ಯಪ್ರಾಣ



ವೃಂದಾವನ ಸುತ್ತಲಿನ ಮಂಟಪ



ಸಪ್ತನದಿ ಸಂಗಮ, ವಶಿಷ್ಠ ಪರ್ವತ



ಸತ್ಯಪ್ರಮೋದರಿಂದ ಪ್ರತಿಷ್ಠಿತ ಸತ್ಯನಾಥರು



ಸತ್ಯನಿಧಿಗಳ ಕಾಲದ ಸತ್ಯನಾಥರು



ವೃಂದಾವನದಲ್ಲಿಯ ಅವಶೇಷಗಳು



ವೃಂದಾವನ ಸನ್ನಿಧಾನದಲ್ಲಿ ಮೂಲರಾಮದೇವರ ಪೂಜೆ



ಕರ್ನೂಲ್‌ನಲ್ಲಿಯ ಸತ್ಯನಿಧಿಗಳ ಮಂಟಪ



ಸತ್ಯನಿಧಿಗಳ ಪಾದುಕೆಗಳು

तदानीं गुरुवर्याणामन्त्यकाले समागते ।
समीपस्थाः प्रधानाद्या अपृच्छन्गुरुशेखरान् ।।४०।।

स्वामिभिश्श्रूयतां सम्यगस्मद्वाक्यमितः परम् ।
संस्थानं भवतां देयं केभ्योऽस्माभिः पुरातनम् ।
इत्थमुक्तास्ततस्तेभ्यः प्रोचुस्ते गुरुशेखराः ।।४१।।

कौलगीरघुनाथाख्याचार्याः काशीपुरं गताः ।
तदा गमनपर्यन्तं सत्यव्रतमुनीश्वरान् ।।४२।।

अस्माभिः प्राग्धर्मपुर्यां स्थापितान् पण्डितोत्तमान् ।
आहूय देयं संस्थानं तेभ्य एवास्मदाज्ञया ।।४३।।

तैरेव रघुनाथाख्याचार्येभ्यो विधिपूर्वकम् ।
तुर्याश्रमो दापनीयस्संस्थानं च पुरातनम् ।।४४।।

इत्युक्त्वा गुरुराजास्ते वत्सरे युवसंज्ञके ।
मासेऽथ कार्तिके शुक्ले पक्षे हरिदिने तदा ।।४५।।

पाण्डुरंङ्गाभिधे क्षेत्रे त्यक्त्वा देहं परं ययुः ।
श्रीवेदनिध्याख्यगुरोस्सुरम्यां
कथामिमां यश्शृणुयात्रिकाले ।
स वादिवृन्दान्यखिलानि बुद्ध्या
जित्वाऽऽप्नुयात् कीर्तिमनन्यसाध्याम् ।।४६।।

**इति षोडशशाखा**

**अथ सप्तदशशाखा**

ततस्तेभ्योददुस्सत्यनिधितीर्थगुरुत्तमाः ।
इति नाम परं प्रीतास्सत्यव्रतगुरूत्तमाः ।।१२।।

तेभ्यो दत्वा वंशरामं वेदव्यासं तृतीयकम् ।
विभवैः प्रेषयामासुस्तदा कर्नाटकं प्रति ।।१३।।

पूर्वं यथा वेदनिधिश्रीपादाश्चोलमण्डलम् ।
गत्वा दिग्विजयं चक्रुस्तथैवैतेऽपि चक्रिरे ।।१४।।

सत्यव्रतस्वामिनस्तु गत्वा श्रीरङ्गपट्टणम् ।
देशे देशे संचरन्तः पुनस्सांगलगीं ययुः ।।१५।।

ततस्तेऽप्यागताश्शीघ्रं श्रीसत्यनिधिसंज्ञकाः ।
सत्यव्रतास्तदा तेभ्यो महासंस्थानमार्पयन् ।।१६।।

सत्यव्रतश्रीगुरुराजवर्याः
सुस्वस्थचित्ता बहुधान्यवर्षे ।
तपस्यमासाद्य दलस्य षष्ठ्यां
त्यक्त्वा तनुं श्रीहरिलोकमापुः ।।१७।।

सां(सं) गलिग्यां ततस्सत्यनिधितीर्थगुरूत्तमाः ।
स्थित्वा संस्थानदानार्थं मनसा समचिन्तयन् ।।१८।।

ततस्सत्यानन्दतीर्थान् वेदनिध्यार्यहस्तजान् ।
तान् समाहूय श्रीपादाश्श्रीसत्यनिधिसंज्ञकाः ।।१९।।

कृत्वाऽथ दण्डव्यत्यासं पाण्डित्यबलमीक्ष्य ते ।
अभिषिच्याणुसंस्थानं ददुस्तेभ्यो मुदान्विताः ।।२०।।

ततो गुणनिधिभ्योऽपि ददुस्सन्न्यासमादरात् ।
अग्रे तेभ्योऽणुसंस्थानमेतेभ्यो दापनेच्छया ।।२१।।

ततः कालान्तरे तेऽथ सत्यानन्दमुनीश्वराः ।
भुवि देहं परित्यज्य जग्मुर्हरिपदं परम् ।।२२।।

अथ स्वयं गुणनिधितीर्थेभ्यो गुरुराट्पदम् ।
अभिषिच्य ददुः प्रीताश्श्रीसत्यनिधिसंज्ञकाः ।।२३।।

ततस्तेऽप्यणुसंस्थानसंयुताः पैठणादिषु ।
कृत्वा दिग्विजयं पश्चात् परलोकमितो गताः ।।२४।।

ततः पुरातनान् कृष्णद्वैपायनकरोद्भवान् ।
विद्यानाथाभिधान् पूर्वं वेदनिध्याख्ययोगिभिः ।।२५।।

दण्डव्यत्यासतो रङ्गनाथतीर्थ इतीरितान् ।
संगलिग्यां स्थापितांस्तान् समाहूय गुरूत्तमाः ।।२६।।

सत्यनिध्याख्यश्रीपादाः परीक्षार्थं सभातले ।
सर्वान् समाह्वयामासुस्स्वीयहस्ताब्जसंभवान् ।।२७।।
कल्परीरामचन्द्राख्यतीर्थास्तत्र समागताः ।
लक्ष्मीकान्तमुनीन्द्राख्यतीर्थावपि समागतौ ।।२८।।

व्यासतीर्थान् मणिग्रामाच्छ्रीपादान्तिकमागताः ।
तेषां मध्ये रङ्गनाथतीर्थाश्श्रेष्ठतमास्तदा ।।२९।।

तेषां वाग्व्यवहारेण सभास्था विस्मितास्तदा ।
श्रीपादाः परमप्रीता अणुसंस्थानमार्पयन् ।।३०।।

व्यत्यासं दण्डयोः कृत्वाऽभिषिच्य परमादरात् ।
अघोषयन् सत्यनाथश्रीपादा इति गायकैः ।।३१।।

वंशरामं ततो दत्वा वेदव्यासं तृतीयकम् ।
श्रीभाग्यनगरप्रान्तं प्रेषयामासुराशु तान् ।।३२।।

तेषामनुगतान् व्यासतीर्थानपि विधाय ते ।
प्रसन्नविठ्ठलं व्यासं चिप्पटाख्यं स साधनम् ।।३३।।

दत्वा वाहनादीन्सत्यनाथान्यथा तथा ।
इमानाज्ञापयंस्ते तु विजयाख्यपुरं प्रति ।।३४।।

ततस्सङ्गलर्गी त्यक्त्वा महासंस्थानसंयुताः ।
सत्यनिध्याख्यश्रीपादास्तीर्थयात्राप्रसङ्गतः ।।३५।।

कृष्णाभीमरथीतुंङ्गभद्रातीरनिवासिनाम् ।
प्राचीनगुरवर्याणां गत्वा वृन्दावनानि ते ।।३६।।

गुरौ सिंहगते धर्मपुर्यां गोदावरीं प्रति ।
गत्वा स्नात्वाऽथ चिंचोर्ली जग्मुश्श्रीपादशेखराः ।।३७।।

गत्वा स्नात्वाऽथ स्नेहं सम्पाद्य युक्तितः ।
निवृत्तिसङ्गमं प्रापुरन्तकाले समागते ।।३८।।

शार्वर्यब्दे मार्गशीर्षमासे पक्षे सिताभिधे ।
दशम्यां सत्यनिध्याख्यतीर्था हरिपदं ययुः ।।३९।।

सत्यव्रतसत्यनिधीनां भक्त्या योऽनुवर्णयेच्चरितम् ।
स भवति धनधान्ययुतो भक्तिं लभते च केशवेऽतितराम् ।।४०।।

**-: इति दैवज्ञभीमाचार्य विरचिते श्रीपूर्णबोधगुरुवंशकथाकल्पतरौ सप्तदशशाखा :-**

---

# स्तोत्रनिधिः

जगद्गुरुं सत्यनिधिं सर्वशास्त्रविशारदम् ।
प्रणमामि सदा भक्त्या दुर्वादिजय कांक्षया ।। अभिनवगदा

नौमि सत्यनिधिं तस्माद्विजयः सर्वदा मम ।
भवत्येवाखिलज्ञानसिद्धयर्थं ज्ञानदं गुरुम् ।। मायावादखंडनपरशुः

ज्ञानादिगुणसंपूर्णममोघानुग्रहं गुरुम् ।
वंदे सत्यनिधिं भूयः टीकार्थज्ञानसिद्धये ।। उपाधिखंडनपरशुः

जयतीर्थमुनिं नत्वा गुरुं सत्यनिधिं तथा ।
व्यक्तीकरिष्ये मिथ्यात्वमानखंडनपंचिकाम् ।।

आलोड्य सर्वशास्त्राणि अतिगूढार्थबुद्धितः ।
सर्ववादिजयश्रेष्टानहं वन्दे गुरून् सदा ।। प्रपंचमिथ्यात्वानुमानखण्डनपरशुः

प्रणम्य पादयुगलं गुरोः सत्यनिधेर्मुनेः ।
कर्मनिर्णयटीकाया भावं वक्ष्यामि शक्तितः ।। कर्मप्रकाशः

कीटेन कारयामास यथा कृष्णस्तथा मया ।
कृपामात्रेण साम्राज्यं तं सत्यनिधिमाश्रये ।। रूपावतार

अपारिजातो यः ख्यातो द्वेषदोषविवर्जनात् ।
इष्टदानात् पारिजातं वन्दे सत्यनिधिं मुदे ।। अभिनवामृतम् ।

ज्ञानभक्त्यादिसंपन्नं साधुसेव्यं जगद्गुरुम् ।
श्रीमत्सत्यनिधिं नत्वा व्याकुर्वे न्यायदीपिकाम् ।। वाक्यविवेकः

वादे विजयमन्विच्छन् नौमि सत्यनिधिं गुरुम् ।
स्मरणाद्यस्य विजयो भवत्येव हि वादिनाम् ।। विजयमाला

वादिनो नरशब्देन जगुः संसदि वादिनाम् ।
बुधा येन पराभूतान् तं सत्यनिधिमाश्रये ।। अभिनवतांडवम् (प्रत्यक्षखण्डः)

न क्षमा यस्य पुरतः वक्तुं सदसि वादिनः ।
अभ्यस्ताखिलविद्याढ्याः श्रये सत्यनिधिं गुरुम् ।। शब्दखण्डः

ज्ञानवैराग्यभक्त्यादेः मेने सत्यव्रतो गुरुः ।
सत्यलोकनिधिं भक्त्या तं सत्यनिधिमाश्रये ।। अनुमानखण्डः

अनधीत्य महाभाष्यं व्याख्यातं यदनुग्रहात् ।
वन्दे तं विधिना सत्यनिधिं विज्ञानसिद्धये ।।

संस्तुत्य चरणौ सत्यनिधेः सम्यग् जगद्गुरोः ।
दुर्घटस्यापि चोद्यस्य वक्ष्येऽभिनवमुत्तरम् ।।

आलंब्य चरणौ सत्यनिधेस्तस्य कृपाबलात् ।
अशक्तोऽपि समाधातुं वक्ष्येऽभिनवमुत्तरम् ।।

अशक्तोऽत्र समाधानं वक्तुं यद्यपि संस्मृतेः ।
गुरूणामधुना वक्ष्ये येनात्मा संप्रसीदति ।।

पदवाक्यप्रमाणज्ञान् गुरून् सत्यनिधीनहम् ।
टीकाभावं प्रवक्ष्यामि नत्वा तेषां कृपाबलात् ।। अभिनव चन्द्रिका

यदनुग्रहमात्रेण सद्भिरिष्टमवाप्यते ।
भक्त्या नमामि तं सत्यनिधिं लोकगुरुं मुदे ।। अध्याय २

नौमि सत्यनिधिं यस्माल्लेभिरे बहवः श्रियम् ।
कोपाभावात् कोऽपि शापं न लेभे तं दयानिधिम् ।। अध्याय ३

स्वयं प्रभातो निगमार्थसार्थो यस्यातिवेलप्रतिभाम्बुराशेः ।
तं सत्यनिध्याह्वाय तीर्थराजं वन्दारुमन्दारुमथाभिवन्दे ।। (छ आ)

विद्यापत्यादिसम्पत्तीः यद्वृन्दावन सेवनात् ।
लभन्ते मद्गुरुं मर्त्यः तं सत्यनिधिमाश्रये ।। (भा टि)

सत्यनिध्याख्ययतिराट्छलारिनृहरी गुरू ।
विद्यामन्त्रोपदेष्टारौ वन्देऽभिमत सिद्धये ।।

इत्थं सत्यनिधिछलारिनरसिंहाचार्यशिष्येण वै ।
शेषेणारचितो दशप्रमतिजश्रीतन्त्रसारस्य तु ।।

व्याख्याः वीक्ष्य सदर्थसंग्रह उरूः सत्सम्प्रदायागताः ।
सम्पूर्णः समभूदनेन गुरुहृद्गः श्रीपतिः प्रीयतां ।।

सत्यनिध्यार्यमाशासे सत्यनिध्यार्य पूजकान् ।
सत्यनिध्यार्यबुद्धीशसत्यनिध्यार्यपूजितम् ।।

"भवत्पुत्रस्य संस्थानप्राप्तिः भविष्यति" इति भावेन जन्मान्तरे संस्थान-प्राप्तिश्च भविष्यति इति वरश्च दत्तः । सत्यनिधिस्वामिनां अमोघवरबलेन श्रीसत्यनाथस्वामिनां कृपया सुमतिस्वामिपुत्रेण मया संस्थानं लब्धं इत्यादि प्रमेय विशेषः सूचितः । (सत्याभिनवतीर्थाः)

## श्रीसत्यनिधितीर्थ विरचिता प्रकृतिश्रुतिसुधा

जन्माद्यस्य यतोऽभूत् तस्मिन् जगदाश्रये श्रियो धाम्नि ।
जनके जाग्रति जंतुः जीवनहेतोश्चरत्यहो देशान् ।।१।।

तातो जगतां त्राता जनयित्री संपदां नेत्री।
येषां तौ गोप्तारौ याचयेयुः तेऽपि किं नीचान् ।।२।।

अधनानां को भोगः कानि धनानि श्रिया विहीनानाम् ।
का श्रीर्नित्या पुंसां हन्त रमाकांतमभजतामंतः ।।३।।

सिध्यंतु कथं कामाः देशानपि धावतां तेषाम् ।
येषां न कामजनको दयते दयितः श्रियो देव्याः ।।४।।

श्रीनिधिमवधीर्य खलान् भजतामपि दीर्यते न दारिद्र्यम् ।
भक्षयतामपि लशुनं न क्षयमुपगच्छति व्याधिः ।।५।।

निर्भरमपि निजगर्भं नियतं रक्षेत् प्रसूर्यदि प्रेम्णा ।
कुक्षिस्थं जगदेतद्रक्षेत् नित्यं जगन्निधिः सत्यम् ।।६।।

शिक्षयतोऽपि नरेन्द्रान् अर्थापेक्षान् भजन्ति कुक्षिकृते ।
स्वीकृतरक्षादीक्षं न श्रीपतिमाश्रयन्ति निरपेक्षम् ।।७।।

अप्रतिहारनिरोधं निर्बाधं निरपराधमनिषेधम् ।
भूलक्ष्म्योर्नेतारं त्रातारं ध्रुवमुपासते कुशलाः ।।८।।

भजते नित्यं राज्ञः प्राज्ञोऽपि न देवतां श्रिया नियताम् ।
गच्छति देशाननिशं न तु गङ्गां पावनतरङ्गाम् ।।९।।

श्रीमान् यदि संसेव्यः तर्हि श्रीकान्त एव संसेव्यः ।
अथ चेदुत्तमपुरुषः पुरुषोत्तमः तर्हि संसेव्यः ।।१०।।

मधुरिपुचरणाश्रयिणं संसारः परिभवेत्कथमसारः ।
केसरिपरिसरवसतिमदकरिसमजः कथं नु बाधेत ।।११।।

काङ्क्षति मुह्यति यतते धावति याचति पुनर्व्यथते ।
कश्चन परमं तत्त्वं निश्चिनुते सोऽश्नुतेऽखिलान् कामान् ।।१२।।

विषयान् यः सापायान् कामयते मोहयवनिकामयते ।
शरणं भगवच्चरणं काङ्क्षति धन्यः स कां क्षतिमुपैति ।।१३।।

हातव्यं यदि सर्वं तृष्णामेकां जहातु परम् ।
स्वीकार्यं यदि सर्वं स्वीकुरुतां कमपि लोकनिधिम् ।।१४।।

ऋभवः कंजभवो वा स भवो वा सन्तु संपदां प्रभवः ।
किं तैः श्रीकामयितुः संततचिन्ताप्रशान्तकामस्य ।।१५।

किमलभ्यं श्रीनेतुः चिन्ताचिन्तामणौ करस्थायाम् ।
किं लभ्यं पुनरथवा तस्यां फल्गूकृतापवर्गायाम् ।।१६।।

वहतु कियंतं कालं क्षुद्रद्वारोपसर्पणश्रान्तिम् ।
विन्यस्यतु कौटुम्बं भगवति विश्वंभरे भारम् ।।१७।।

हृदि सन्तं श्रीकान्तं हित्वा ये रञ्जयन्ति राजानम् ।
ते वेतस्वति सलिलं त्यक्त्वा दूनाः खनन्ति धन्वानम् ।।१८।।

अजनितकर्मायासानपशुपुरोडाशदक्षिणादीक्षान् ।
कुर्यात् कीर्तनयज्ञान् पद्मासद्मायितस्य देवस्य ।।१९।।

मौनं न तु मौखर्यं विजनेऽवस्थानमेव नास्थाने ।
स्थैर्यं न तु कातर्यं सकलजगत्पालकं प्रभुं भजताम् ।।२०।।

वीचिषु विरतासु पुनर्वारिनिधौ स्नातुमीहमान इव ।
कृष्णं सेवितुमिच्छिति मर्त्यः तृष्णासु भोगशमितासु ।।२१।।

विस्मृतपरतत्वनिधिः धनवंतं परिभवंतमपि ।
उपसर्पति वसुलोभादिव सर्पं धृतफणारत्नम् ।।२२।।

रमणी रमणीयतनुस्तनयाः प्रणयान्विताश्च किं कुर्युः ।
करणापगमे यदि न स्मरणीयं चरणपङ्कजं शौरेः ।।२३।।

वितरणमेव विधेयं पुण्यवशाद्विभवशालिना पुंसा ।
तरणं वा भवजलधेर्भगवति भक्त्या विवेकवता ।।२४।।

कथमीक्षतेऽन्ययुवतीः रजसा तमसा च संवृतो लोकः ।
नालोकयते वा कथमच्युतदृष्टिर्द्वयातिगः किमपि ।।२५।।

नरकोऽपि न भीषयते द्वाविह निःशंकवर्तिनौ पुरुषौ ।
नरकान्तकचिन्तकमपि परकान्ताक्रान्तमनसमपि ।।२६।।

नाको नरको भूरिति विश्वास्यं कर्मनिर्मितं तदा विश्वम् ।
यदि सङ्कर्षणवदनज्वलनज्वाला निरातङ्कम् ।।२७।।

गृह्णाति रयमकार्ये न तु निरयं क्वापि गृह्णाति ।
गणयति धनमनिशं न तु निधनं विष्णुमायांधः ।।२८।।

वैतरणी तरणीया कथमिति न विचारणीया सा ।
तरणी या भवजलधेः करणीया सा हरेश्चिन्ता ।।२९।।

यः श्लाघते विरक्तिं मुक्त्यै मुक्त्वा मुकुन्दपदभक्तिम् ।
अपहाय सुव्रतां गां दुग्धे व्याघ्रीं स दुग्धाय ।।३०।।

विषयान्तरसञ्चारादायस्तायाः चिरं सरस्वत्याः ।
विश्रान्तिपदमभिज्ञः कुर्यात् सर्वेशगुणगणारामम् ।।३१।।

कमला कामयितारं कामितकल्याणकल्पनाकल्पम् ।
ये संवन्ते सततं परमन्ते सुखमयन्ति परमन्ते ।।३२।।

---

# ಶ್ರೀಸತ್ಯನಿಧಿವಿರಚಿತಮ್ ವಾಯುಭಾರತೀಸ್ತೋತ್ರಮ್

ಮಹಾಲಕ್ಷ್ಮೀಪತಿಶ್ರೀಮಾಚ್ಚರಣಾಬ್ಜಪರಾಯಣಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೧।
ಗಂಗಾಗೋದಾವರೀಕೃಷ್ಣಾಕಾವೇರೀದಿವ್ಯತೀರಗಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೨।
ಶ್ರೀಸುರಶ್ರೀರಂಗಸತ್ಯಾಪತಿಶ್ರೀಪಾದಪೂಜಕಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೩।
ಶ್ರೀರಾಮಚರಣದ್ರೋಹಿರಾಕ್ಷಸಾನೀಕಮರ್ದನಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೪।
ರಘುನಾಥಗುಣೋತ್ಕರ್ಷವರ್ಣನೈಕಸ್ವಲಕ್ಷಣಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೫।
ಶ್ರೀನಿವಾಸಾಂಘ್ರಿಕಮಲಮಕರಂದಪಷಟ್ಪದಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೬।
ಶ್ರೀಕೃಷ್ಣಪಾದಪದ್ಮಾರ್ಚಾಮಾತ್ರಾರ್ಥಕೃತಸೇವಿತಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೭।
ದುರ್ಯೋಧನಬಕಪ್ರಖ್ಯಮಾಗಧಾದಿವಿನಾಶಕಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೮।
ಏಕವಿಂಶತಿದುರ್ಭಾಷ್ಯಖಂಡನೇಖಂಡಿತೇಶ್ವರಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೯।
ನಿರ್ದೋಷಗುಣಸಂದೋಹಶ್ರೀಕೃಷ್ಣಶ್ರೀಪದಾರ್ಚಕಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೧೦।
ಮೂಲಾವತಾರರೂಪೈಶ್ಚ ಶ್ರೀಶಪಾದಾಬ್ಜಸದ್ರತಿಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೧೧।
ಹನುಮದ್ಭೀಮಸೇನಶ್ರೀಪೂರ್ಣಪ್ರಜ್ಞಾಖ್ಯರೂಪಿಣಮ್
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೧೨।
ಶ್ರುತಿಸ್ಮೃತೀತಿಹಾಸೋರುಸುಪ್ರಸಿದ್ಧೋಚ್ಛ್ರಯಂ ಸದಾ
ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ ।೧೩।

ಕಿಂಚಾದ್ಯಾಪೀಹ ಯಚ್ಛಿಷ್ಯಪ್ರಪ್ರಶಿಷ್ಯಾನುಶಿಷ್ಯಕೇ
ಮಹಾಜನೇಮಹದ್ಭಾಗ್ಯಂ ವಿದ್ಯಾವಿತ್ತಾದ್ಯಭೀಷ್ಟದಮ್ ।೧೪ ।
ತಸ್ಯ ವಾಯೋರ್ಹಿಮಹಾತ್ಮ್ಯಂ ಲೇಶಲೇಶಾತಿಲೇಶತಃ
ವರ್ಣಿತಂ ಸ್ವಮನಶುದ್ಧ್ಯೈ ತತ್ಪ್ರಸಾದಾನ್ನ ಚಾನ್ಯಥಾ ।೧೫ ।
ಇದಂ ಸ್ತೋತ್ರಂ ಪಠೇದ್ಯಸ್ತು ಭಕ್ತ್ಯಾನಿಯತವಾಙ್ಮನಾಃ
ತಸ್ಯ ಸರ್ವೇಷ್ಟಸಿದ್ಧಿರ್ಹಿ ತತ್ಪ್ರಸಾದಾದ್ಭವೇದ್ಧ್ರುವಮ್ ।೧೬ ।
ನಮೋನಮಃ ಶ್ರೀಹರಯೇ ನಮಃಶ್ರೀವಾಯವೇ ತಥಾ
ನಮೋನಮೋ ದೇವತಾಭ್ಯೋ ಗುರುಭ್ಯಶ್ಚ ನಮೋನಮಃ ।೧೭ ।

[1]ಇತಿ ಶ್ರೀಸತ್ಯವ್ರತಪೂಜ್ಯಪಾದಶಿಷ್ಯಶ್ರೀಸತ್ಯನಿಧಿಸ್ವಾಮಿಕೃತಮ್
ವಾಯುಭಾರತೀಸ್ತೋತ್ರಂ ಸಂಪೂರ್ಣಮ್

ಶ್ರೀಕೃಷ್ಣಾರ್ಪಣಮಸ್ತು

[2]ಶ್ರೀಮದ್ವೇದನಿಧೀಶ್ವರಪ್ರಕರಕಂಜೋದ್ಭೂತಸತ್ಯವ್ರತ–
ಶ್ರೀಪಾದೌಪಸದೇನ ಸತ್ಯನಿಧಿನಾ ಸನ್ಯಾಸಿನಾ ಸಾದರಂ
ತತ್ಸ್ವಾನ್ತಸ್ಥರಘುಶ್ರುತೀಶಕರುಣಾಮಾತ್ರಾರ್ಥಿನಾ ಪುಸ್ತಕಂ
ವರ್ಷೇ ವೈ ವಿಕೃತೌ ವರೇ ಶಿವಪುರೇ ಚೋತ್ಪಾದಿತಂ ಲೇಖನಾತ್ ।೧ ।

[3]।। ಮುದ್ಗಲನರಸಿಂಹೋ ವಿಜಯತೇ ।।

---

1. ಈ ಸ್ತೋತ್ರದಶುದ್ಧವಾದಪಾಠ ಉಪಲಬ್ಧವಿಲ್ಲದ್ದರಿಂದ ಯಾಥಾವತ್ತಾಗಿ ಮುದ್ರಿಸಲಾಗಿದೆ. ಶುದ್ಧವಾದಪ್ರತಿಸಿಕ್ಕಲ್ಲಿ ಶೋಧಿಸಿ ಮುದ್ರಿಸಲಾಗುವದು.

2. ಶ್ರೀಸತ್ಯನಿಧಿತೀರ್ಥರು ಶಿವಪುರದಲ್ಲಿರುವಾಗ ವಿಕೃತಿನಾಮ ಸಂವತ್ಸರದಲ್ಲಿ ಶ್ರೀಮದಥರ್ವಣಭಾಷ್ಯವ್ಯಾಸತೀರ್ಥೀಯ ಟೀಕಾವನ್ನು ತಮ್ಮ ಸುಂದರವಾದ ಅಕ್ಷರಗಳಲ್ಲಿ ಬರೆದಿದ್ದಾರೆ. ಆ ಪುಸ್ತಕದ ಕೊನೆಯಲ್ಲಿ ಈ ಶ್ಲೋಕವು ಕಂಗೊಳಿಸುತ್ತಾ ಶ್ರೀಸತ್ಯನಿಧಿಗಳು ಇದೇ ರೀತಿ ಅನೇಕ ಪ್ರಾಚೀನಗ್ರಂಥಗಳನ್ನು ತಮ್ಮ ಹಸ್ತದಿಂದ ಬರೆದಿರಬಹುದೆಂಬ ತರ್ಕಕ್ಕೆ ನಾಂದಿಹಾಡಿದೆ.

೩. ಪುಸ್ತಕದ ಕಡೆಯಲ್ಲಿ ಈ ರೀತಿ ಮುದ್ಗಲನರಸಿಂಹನನ್ನು ಸ್ಮರಿಸಿದ್ದಾರೆ.

# REGARDING THE IMPORTANCE OF SANGAMESHWARAM

## (Extract from the Hindu dated 16th may 1965)

1. The confluence of rivers have been held very sacred in our country and given a venerable place as celebrated centres of pilgrimage. This may perhaps be to symbolically emphasise the essential oneness of God the Supreme, as the Scriptures State. Akasath Pathithanthoyam Yathagachathi Sagaram, Sarvadeva Namaskaraha Sri Keshavam Prathigachathi... meaning Just as all the rain drops falling from the sky reach the oceans, worship done to Gods in different forms, reach God Keshava.

2. Near about Kurnool, there are two important sacred confluences on the river Krishna, one at Koodavalli Sangam where river Tungabhadra joins with river Krishna near Alampur and another down-stream at a place called Sangameshwaram near Yellala in Nandikotkur taluk where Bhavanasi river enters Krishna. In and around Koodavalli Sangham and Sagameshwaram there are several shrines for God Shiva and these temples attract sizable number of pilgrims for the Mahasivarathri festival.

3. Sangameshwara in Nandikotkur taluk near Yeallala village is the principle of the five places nearby where there are temples for Shiva. Sangameshwaram, Siddeshwaram, Someshwaram, Kapileshwaram, and Malleshwaram are those five places, which are a few

miles from each other. The temple at Malleshwaram is on the left bank of river Krishna while the rest are on the Right Bank. It was at this siddeswaram-malleshwaram belt; the contemplated Siddeshwaram project was to have been built across the river Krishna which idea was vigorously pursued in the composite Madras State and later given up.

4. Now the river Krishna in Andhra is to be harnessed for generation of hydel power at srisailam and both for irrigation and generation of hydel power at the Nagarjunasagar, and the construction of the above two dams is in progress.

5. The bunch of five temples for God Shiva at the above places including Sangameshwaram are situated in a picturesque setting, flanking the gorgeous river Krishna flowing here amidst rocks, making an eternal roar echoed on nearby hills.

6. A number of anecdotes are mentioned connecting these places with sequences in Ramayan and Mahabharatha. The Shiva linga at Sangameshwaram is stated to have been intalled by Yudhistira, Dharmaraja along with his four brothers and Draupadi, came here on a pilgrimage and wished to establish one Eeswara Lingam at the site. Bheemasena was asked to go to Varanasi and fetch a Shiva Linga for being installed here. But as Bheemasena could not arrive with the Lingam at the appointed Muhurtha, Dharmaraja in consultation with elders, cut a neem tree and installed a wooden Linga made out of neem wood at the appointed

time with all ceremony. When Bhimasena arrived, all this was over and in sheer disappointment and anger, threw the Linga he had brought into the river. Later Dharmaraja pacified Bheema and ordained that all devotees will first worship the Bheema Linga which is planted in a slanting position in a platform in the bed of river Krishna and then only come to the Sangameshwaram Temple. Even today people first do worship to the Bheema Linga and then visit the Sangameshwaram temple. The Lingam at the Sangameshwaram temple is not the conventional round Lingam but a rectangular one with rough surface. It is stated that it was originally a neem Log, which turned into stone after the birth of kali Yuga.

7. There are a number of Tirtha ghattas near about this place, with legends extolling their religious significance. Besides the main temple at Sangameshwaram, in its vicinity is a temple, which is locally, called Rathalayam and its shape resembles a chariot.

8. Near Sangameshwaram is a Brindavanam for Sri Satyanidhi swami, who, before becoming the high priest of the Uttaradi Math did penance and taught Vedas to his disciples. During a summer, when there were no floods in the river Krishna, the Nawab of Kurnool wanted to invade the adjoining territory by crossing the River Krishna. The raja of Kolhapur hearing the spiritual powers of Satyanidhi Swami came and prayed the Swami to protect him from the Nawab. The Swamiji

agreed and gave the Rajah, Manthrakshata and asked him to go back to his place without looking back. The Rajah did so and after crossing the River Krishna turned behind and found River Krishna in spate, flowing end to end, which the rajah learnt later was due to the Varuna Japam cone by the Swamiji. The Kurnool Nawab who came with his army to raid Kolhapur was held up on this side and had to return after waiting in vain for many days at Sangameshwaram. The Rajah of Kolhapur who had sway over Sangameshwaram, later expressed gratitude to Satyanidhi swami and granted lands to Satyanidhi Swami.

9. At Sangameshwaram there exists a now a Brindavan of Sri Satyanidhi Swami. Here in a mantapam, there is an elevated platform on which stands the Brindavanam of Sri Satyanidhi Swami. The Swamiji himself was an expert sculptor and prior to his attaining Samadhi, he himself made his Brindavanam out of stone, carving round it the 24 figures of god Kesava. The Swamiji carved his own figure and of Kamadhenu with his udder over the head of the Swamiji. Just opposite his Brindavanam there is an idol of Dasa Anjaneyaswami beautifully carved on stone by the Swamiji himself.

**सत्यनिधिविलासकाव्यस्थसूक्तयः**

न लाभहेतोः सहिपूर्णशक्तिः गृह्णाति मानंतु जनावनाय । १.२३
अपेक्ष्यमाणो दुरवापमर्थं नैवाक्षमं प्रार्थयते हि लोकः। १.२४
किन्नाग्रहीत्पूर्णमनोरथोपि शाखं च शिष्टं पृथुकम्पयोवा । १.३१
खद्योतताराग्रहदीधितीनां प्रद्योने जाग्रति कोविशेषः । ३.१५
सलोकस्सालोको भवति सविता यँवलयते
पराचीनो यस्मात् स भवति तमस्काण्डमलिनः । ३.१९
आलोकोनिष्ठस्य गतं दुरध्वा नह्याहरन्ते भ्रममावहन्तः । ४.१७
लोकोत्तराणां वचनानि लोके नार्थेन दृष्टानि विना कृतानि । ४.३२
ईश्वरेषु न वयो हि निदानं । ५.२
सा हि रञ्जयति लोकमशोकं । ५.१०
न जानु दघ्नानि जलानि योषितः स्वयं तरन्तीति जगत्सुविश्रुतम् । ६.८
जनेषु दीनेषु निसर्गसुव्रताः चरन्ति लोकं ह्यभितोऽपि निस्पृहाः । ६.२०
चरन्घनः कन्दलयन् गिरौ द्रुमान् निराकरोत्येवहि दावपावकान् । ६.२२
च्छायामयो दीपमुपेत्य तिष्टत्यग्रे स्थितौ धावति चान्धकारः । ७.४५
किम् लभ्यं पुनरथवा तस्यां फल्गूकृतापवर्गायाम् । ८.२३
अपहाय सुव्रतां गां दुग्धेव्याघ्रीं स दुग्धाय । ८.३७

---

## व्याख्योदाहृतश्रुतिसंग्रहः

राजा राजसूयेन यजेत ।।१.६३।।

सायमग्निं प्रविशन्ति ।।२.७।।

यावज्जीवमग्निहोत्रं जुहोति ।।४.२०।।

पशुना यजेत ।।४.२०।।

वसन्ते ब्राह्मणमुपनयीत ।।४.४८।।

वसन्ते ब्रह्मणोऽग्नीनादधीत ।।५.२८।।

यदग्नये च प्रजापतये च सायं जुहोति
यत्सूर्याय प्रजापतये च प्रातः ।।५.२९।।

पयसा जुहोति ।।५.२९।।

पौर्णमास्या पौर्णमास्यां यजते
अमावास्या अमावास्यायां यजते ।।५.३०।।।।

वसन्ते वसन्ते ज्योतिषा यजेत ।।५.३५।।

ये वै तन्वा अं विसृजन्ति धीराते जनासोऽमृतत्वं भजन्ते ।।५.५०।।

सितासिते सरिते यत्र सङ्ते तत्राप्लुतासो दिवमुत्पतन्ति ।।५.५१।।

---



ಓ......ಪರಮಹಂಸ ಪ್ರಧಾನ
ಆಧ್ಯಾತ್ಮಿಕ ಅರಿವಿನ ಕಡಲು, ಅಧರ್ಮಕ್ಕೆ ಸಿಡಿಲು
ತಪಸ್ಸಿನ ಆಗರ, ಅಜ್ಞಾನ ತಿಮಿರಕ್ಕೆ ತರಣಿ
ಭಾರತಧರ್ಮದ ಆಶಾಜ್ಯೋತಿ
ಜಗತ್ತನ್ನು ಜಾಗರ ಗೊಳಿಸುವ ಕಣ್ಣು
ಭಕ್ತರ ಬಯಕೆಗಳನ್ನು ಸಾಕಾರಗೊಳಿಸುವ ಮುಗುಳು
ಶ್ರೋತೃಗಳನ್ನು ಮಂತ್ರಮುಗ್ಧಗೊಳಿಸುವ ಪ್ರವಚನ
ಚಾತುರೀ
ಸಮಾಜದ ಅತಿಸಣ್ಣ ಜೀವಿಯೊಡನೆಯೂ ಸ್ಪಂದಿಸುವ
ವಿಶಾಲ ಹೃದಯ
ಭವಬೇಗೆಯಲಿ ಬೆಂದ ಕಂದಗಳಿಗೆ ಶೀತಲ ಮಡಿಲು
ಇದೋ ತಮ್ಮ ಪಾವನ ಪಾದಕಮಲಗಳಲ್ಲಿ ಅರ್ಪಿಸುತ್ತಿರುವೆ
ಈ ಕೃತಿ.....